# brown book

# THE BOOK WAS DRENCHED

ಪ್ರತಿಭಾಗ್ರಂಥಮಾಲೆ, ಧಾರವಾಡ. ವರುಷ ೪—ಕಿರಣ ೧

# 'ಮಾಧವಲೀಲೆ'

(ಸ್ವತಂತ್ರ ಸಾಮಾಜಿಕ ಕಾದಂಬರಿ)



ಲೇಖಕರು :

ಶ್ರೀ. ಎಂ. ಜಿ. ವೆಂಕಟೇಶಯ್ಯ, ಎಂ. ಎ.,

ಬಳ್ಳಾರಿ.



ಮಾರ್ಚ್ ೧೯೪೭ ಬೆಲೆ: ೧-೮-೦

ಪ್ರಕಾಶಕರು :
ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ,
ಧಾರವಾಡ.



ಮುದ್ರಕರು :
ಶ್ರೀ. ಎಸ್. ಎಲ್. ಜೋಶಿ
ಮೋಹನ ಮುದ್ರಣಾಲಯ
ಧಾರವಾಡ

# ಮುನ್ನುಡಿ



ಆಂಗ್ಲೇಯ ಭಾಷೆಯಲ್ಲಿದ್ದಂತೆ ವಿವಿಧ ತೆರದ ಹಾಸ್ಯಗಳು ಮತ್ತು ಪರಿಹಾಸ್ಯ ಕನ್ನಡದಲ್ಲಿ ಬರಲು ಸಾಧ್ಯವೆ ಎಂಬುದಕ್ಕೆ ಈ ಕತೆಯು ಒಂದು ಪ್ರಯೋಗವೆಂದು ಭಾವಿಸಿದರೆ ತಪ್ಪಾಗಲಾರದು. ನಮ್ಮ ಪಂಡಿತರ ದೃಷ್ಟಿಯಿಂದ ಹೇಳುವುದಾದರೆ, ರಸವನ್ನು ಹೇಗೆ ನಾವು ಗ್ರಹಿಸಿ ಆನಂದವನ್ನು ಪಡೆಯಬಹುದೋ ಹಾಗೆಯೆ ರಸಾಭಾಸದಿಂದಲೂ ನಾವು ಆನಂದವನ್ನು ಹೊಂದಬಹುದು. ಆದುದರಿಂದಲೇ ಲಾಕ್ಷಣಿಕ ಗ್ರಂಥಕಾರರು ರಸಾಭಾಸವನ್ನೂ ರಸದಲ್ಲೇ ಸೇರಿಸಿರುವರು. ಈ ದೃಷ್ಟಿಯಿಂದ ಈ ಕತೆಯನ್ನು ಓದಿದರೆ ಕೆಲವು ವಿಚಾರಗಳಿಗೆ ಸಮಂಜಸವಾದ ಮಾತುಗಳನ್ನು ಕೇಳಬೇಕಾಗಿ ಬರುವುದಿಲ್ಲ.

ಇದನ್ನು ಬರೆಯುವ ಕಾಲದಲ್ಲಿ ನಾನು ಅನೇಕರಿಗೆ ತೊಂದರೆ ಕೊಟ್ಟಿದ್ದೇನೆ. ಅದರಲ್ಲಿ ಮಿತ್ರರಿಗಿಂತಲೂ ಹೆಚ್ಚಾಗಿ ನನ್ನ ಪತ್ನಿಗೆ ತೊಂದರೆಯಾಗಿದೆ. [illegible] ಇಲ್ಲಿ ನೆನೆಸುತ್ತೇನೆ. ಅನ್ಯರಾಗಿದ್ದ ಪಕ್ಷದಲ್ಲಿ ಅದಕ್ಕೆ ನಾನು ಎಷ್ಟೋ [illegible]ರವನ್ನು ಇಲ್ಲಿ ಹೇಳಬೇಕಾಗಿತ್ತು.

ಇದನ್ನು ತಮ್ಮ ಪ್ರತಿಭಾ ಗ್ರಂಥಮಾಲೆಯಲ್ಲಿ ಪ್ರಕಟಿಸಿಕೊಂಡು ನನ್ನನ್ನು ಪ್ರೋತ್ಸಾಹಿಸಿದ ಸಂಪಾದಕರಿಗೆ ಧನ್ಯವಾದಗಳು.

ಬಳ್ಳಾರಿ.
೨೩-೩-೪೭

ಎಂ. ಜಿ. ವೆಂಕಟೇಶಯ್ಯ.

# ಪ್ರಕಾಶಕರ ಮಾತು



ಕಾಗದದ ಮುಗ್ಗಟ್ಟಿನ ಕಾಲದಲ್ಲೇ ಆರಂಭವಾಗಿ ವರುಷ ವರುಷವೂ ಹೆಚ್ಚಿನ ಬಿಕ್ಕಟ್ಟಿನ ಪ್ರಸಂಗಗಳನ್ನೆದುರಿಸುತ್ತ "ಪ್ರತಿಭಾ ಗ್ರಂಥಮಾಲೆ"ಯು ನಾಲ್ಕನೇ ವರುಷದ ಈ ಹೊಸ ಕಿರಣವನ್ನು ವಾಚಕರಿಗೆ ಸಕಾಲಕ್ಕೆ ಒದಗಿಸುತ್ತಿರುವುದಕ್ಕಾಗಿ ನಮಗೆ ತುಂಬ ಸಂತೋಷವಾಗಿದೆ.

ಈ ವರುಷ ಸಾಧ್ಯವಿದ್ದಷ್ಟು ಉತ್ತಮ ಹಾಗೂ ಸ್ವತಂತ್ರ ಕಾದಂಬರಿಗಳನ್ನೆ ನೀಡಬೇಕೆಂದೂ, ಒಳ್ಳೆಯ ಕಾಗದವನ್ನೇ ಉಪಯೋಗಿಸಬೇಕೆಂದೂ ನಿರ್ಧರಿಸಿದ್ದೇವೆ. ಈ ನಮ್ಮ ಉದ್ದೇಶವನ್ನು ಈಡೇರಿಸಲು ವಾಚಕವೃಂದದ ಪೂರ್ಣ ನೆರವು ಬೇಕೆಂಬುದನ್ನು ಬೇರೆ ಹೇಳುವ ಕಾರಣವಿಲ್ಲ. ಸ್ವತಂತ್ರ ಲೇಖಕರು ಮುಂದಾಗಿ ಬಂದು ತಮ್ಮ ಅಮೌಲ್ಯ ಸಾಹಿತ್ಯ ಕುಸುಮಗಳನ್ನು ಮಾಲೆಗೆ ನೀಡಬೇಕೆಂದು ಈ ಮೂಲಕ ಪ್ರಾರ್ಥಿಸಿಕೊಳ್ಳುತ್ತೇವೆ.

ಶ್ರೀ. ಎಂ. ಜಿ. ವೆಂಕಟೇಶಯ್ಯ ಎಂ. ಎ, ಬಳ್ಳಾರಿ ಅವರು ತಮ್ಮ ಈ ಕಾದಂಬರಿಯನ್ನು ನಮ್ಮ ಮಾಲೆಗೆ ಕೊಟ್ಟದ್ದಕ್ಕಾಗಿ ಅವರಿಗೆ ಆಭಾರಿಯಾಗಿದ್ದೇನೆ. ಎರಡನೆಯದಾಗಿ ಕೊಡಗಿನ ಶ್ರೀ. ಭಾರತೀಸುತರ "ಕಾಲಯಾನ"ವೆಂಬ ವೈಜ್ಞಾನಿಕ ಕಾದಂಬರಿ ಹೊರಡಲಿದೆ. ಇವರೆಲ್ಲರಿಗೂ ನಮ್ಮ ವಂದನೆಗಳು.

ಧಾರವಾಡ ೨೩-೩-೪೭ }
ಯುಗಾದಿ ಪ್ರತಿಪದೆ. }

ಭಾಲಚಂದ್ರ ಘಾಣೇಕರ.

*

# ಮಾಧವ ಲೀಲೆ

## ೧

ಸಣ್ಣ ಪ್ರಾಂತ್ಯಗಳಲ್ಲಿ ಪಾಳೆಯಗಾರರು ಆಳುತ್ತಿದ್ದಾಗ ಅವರ ಕೈಗೆ ಎದುರಿರಲಿಲ್ಲ. ಅಂಥ ಕಾಲದಲ್ಲಿ ಸಾಮಾನ್ಯವಾಗಿ ಹತ್ತು ಪಾಳೆಯಗಾರರ ಅಧಿಪತಿಯಾಗಿ ರಾಜರಾಜನಿದ್ದ ಎಂದರೆ ಇನ್ನು ಆತನ ಮಾತಿಗೆ ಎದುರು ಉಂಟೇ? ಹಿಂದಿನ ಕಾಲದಲ್ಲಿ ರಾಜರೆಂದರೆ ಅವರ ಮಾತಿಗೆ ಎದುರಿಲ್ಲ ಎಂತಲೇ. ನಮ್ಮ ಪಂಡಿತರೊಬ್ಬರು ಅವರ ವಿಚಾರವಾಗಿ ಇವನ್ನು ಆಗಾಗ ಹೇಳುತ್ತಿದ್ದರು.

ಒಬ್ಬ ರಾಜನಿಗೆ ಬದನೆಕಾಯಿಪಲ್ಯ ಬಹಳ ರುಚಿಯಾಗಿದ್ದಂತೆ ತೋರಿತಂತೆ! ಅವನು ಅದನ್ನೇ ಬಹಳವಾಗಿ ಅಪೇಕ್ಷಿಸುತ್ತ ತನ್ನ ಮಂತ್ರಿಯೊಡನೆ ಹೇಳಿದನಂತೆ.

'ಮಂತ್ರೀ, ನೋಡಿದೆಯಾ! ಇಷ್ಟು ತರಕಾರಿ ಪೈಕಿ ರುಚಿಯಾದದ್ದೆಂದರೆ ಬದನೇಕಾಯಿಯೆ!'

'ಅನುಮಾನವೇನು ಸ್ವಾಮಿ! ರಾಜರು ರಸಿಕರು— ರುಚಿಯನ್ನು ಚೆನ್ನಾಗಿ ಬಲ್ಲವರು. ತಮಗೆ ತಿಳಿಯದೆ? ಅದಕ್ಕೇ ಸ್ಮಾರ್ತರ ಮನೆಯಲ್ಲಿ ಏನು ಕೆಲಸವಾಗಲಿ ಬದನೆಕಾಯಿಯಿಲ್ಲದೆ ಆಗುವುದೇ ಇಲ್ಲ. ಆಯುರ್ವೇದದಲ್ಲಿಯೂ ಕೂಡ ರುಚಿಕರವಾದ ಪದಾರ್ಥ ಅಂದರೆ ಈರಣಗೆರೆ ಬದನೆಯಕಾಯಿ ಎಂದಿದ್ದಾರೆ.'

ಎರಡು ದಿನ ಅದೇ ತಿನ್ನುವಹೊತ್ತಿಗೆ ರಾಜನಿಗೆ ಹೊಟ್ಟೆನೋವು ಬಂತು. ಪುನಃ ಮಂತ್ರಿಯೊಡನೆ 'ಏನಯ್ಯಾ ಮಂತ್ರಿ, ನೋಡಿದೆಯಾ ಬದನೆಯಕಾಯಿ ಮಾಡಿದ ಕೆಲಸ!' ಎಂದನು.

'ಏನು ಮಹಾಸ್ವಾಮಿ!'

'ಅಲ್ಲ, ಎರಡು ದಿನ ಪಟ್ಟಾಗಿ ತಿಂದದ್ದಕ್ಕೆ, ಮಹಾ ಉಷ್ಣವಯ್ಯ ಅದು!'

'ಅಲ್ಲವೆ ಸ್ವಾಮಿ—ಉಷ್ಣಪದಾರ್ಥಗಳಲ್ಲಿ ಎತ್ತಿದ ಕೈ ಅದು ಸ್ವಾಮಿ. ಅದಕ್ಕೇ ನೋಡಿ ದೇವರು ಅದಕ್ಕೆ ಗೂಟ ಬಡೆದಿದ್ದಾನೆ!'

ಇದು ರಾಜರ ಅರಮನೆಯವರಲ್ಲಿ ಕೇವಲ ಸಹಜವಾದ ಧರ್ಮ. ಅದಕ್ಕೇ ಕಾಣುತ್ತೆ, ನಮ್ಮವರು ಆ ಚಾಕರಿಗೆ 'ಹೌದಪ್ಪನ ಚಾಕರಿ' ಎನ್ನುವುದು. ರಾಜರು ಏನು ಹೇಳಿದರೂ 'ಹೌದು' ಎನ್ನಬೇಕಾಗುತ್ತೆ.

ದೊರೆಯಾದ ರಾಜರಾಯನಲ್ಲಿಯೂ ಇದೇ ವಿಧವಾದ ಸಾಮಂತರು ಅನೇಕರಿದ್ದರು. ಅವರಲ್ಲಿ ಬಹಳ ಬುದ್ಧಿವಂತನಾದ ಮಂತ್ರಿಯಿದ್ದ; ಅವನ ಹೆಸರು ಹಿರಣ್ಯಯ್ಯ. ಈ ಮಂತ್ರಿ ಎಲ್ಲರಿಗಿಂತಲೂ ರಾಜನಲ್ಲಿ ನಮ್ರತೆ ಹೆಚ್ಚಾಗಿ ತೋರಿಸುತ್ತಿದ್ದ. ಹೇಳಿದ ಮಾತಿಗೆ 'ಹೌದು' ಎಂಬುವುದಲ್ಲದೆ ರಾಜನನ್ನು ಹೊಗಳಿ ಮೆಚ್ಚಿಸುತ್ತಿದ್ದ. ಹೀಗೆ ಮೆಚ್ಚಿಸುತ್ತಿದ್ದುದರಿಂದಲೇ ಅವನಿಗೆ ಮಂತ್ರಿ ಪದವಿ ಸಿಕ್ಕಿದ್ದು.

ದೊರೆಗೂ ಸ್ವಲ್ಪ ವಯಸ್ಸಾಗಿತ್ತು. ಆಗಾಗ ಕೆಮ್ಮು ಬರುತ್ತಿತ್ತು. ಒಂದು ದಿನ ದೊರೆಯು ತನ್ನ ಮಂತ್ರಿಯಾದ ಹಿರಣ್ಯಯ್ಯನ ಮುಂದೆ ಕೆಮ್ಮಿದ. 'ಏನು ಮಂತ್ರಿ, ವಯಸ್ಸಾಯಿತು!' ಎಂದ.

'ಮಹಾಸ್ವಾಮಿಯವರು ಈ ಮಾತನ್ನು ಹೇಳಬಾರದು. ವಯಸ್ಸು ಆಯಿತು ಎನ್ನುವ ಮಾತು ಸರಿಯಾದದ್ದೆಂದು ಮಹಾಸ್ವಾಮಿಯವರು ಭಾವಿಸಬಾರದು. ತಾವು ಅಪ್ಪಣೆ ಕೊಟ್ಟರೆ ಹೇಳುತ್ತೇನೆ, ತಮಗೆ ಈಗ ಇನ್ನೂ ವಯಸ್ಸು ಬರುತ್ತಾಯಿದೆ ಅಂತ. ಐವತ್ತು ವರ್ಷಕ್ಕೆ ವಯಸ್ಸಾಯಿತು ಎಂದರೆ ಯಾರು ತಾನೆ ನಂಬುವರು? ಹಾಗೆ ನಂಬುವರು ತಮ್ಮನ್ನು ಮಹಾಸ್ವಾಮಿಯವರನ್ನು ನೋಡಿಲ್ಲ. ಇದು ಗೃಹಸ್ಥಾಶ್ರಮಕ್ಕೆ ತಕ್ಕ ಕಾಲ ಎಂಬುದು ಮಹಾಸ್ವಾಮಿಯವರಿಗೆ ಗೊತ್ತಿಲ್ಲದೆ ಇಲ್ಲ. ಏನೋ ಸೇವಕನ ಮನಸ್ಸನ್ನೋ ಬುದ್ಧಿಯನ್ನೋ ಪರೀಕ್ಷಿಸುವುದಕ್ಕೋಸ್ಕರ ತಾವು ಈ ಮಾತು ಆಡಿರಬೇಕು. ಈ ಸೇವಕನ ಬಾಯಿಂದ ಸುಳ್ಳೆಂದಿಗೂ ಬರಲಾರದು. ತಾವು ಇನ್ನೂ ಯುವಕರೇ. ಮಹಾಸ್ವಾಮಿಯವರ ಹೃದಯವಂತೂ ಇನ್ನೂ ಯುವಕರ ರೀತಿಯಿಂದಲೇ

ಇದೆ. ಅಷ್ಟೇ ಅಲ್ಲ. ಯಾವ ಯುವಕರಾದರೂ ತಮ್ಮನ್ನು ನೋಡಿ ನಾಚಿಕೆ-ಪಟ್ಟುಕೊಳ್ಳಬೇಕಾದದ್ದೇ!'

ಇಷ್ಟೇ ಅಲ್ಲ. ದೊರೆಗೆ ಜೇನುತುಪ್ಪ, ಹಲಸಿನಹಣ್ಣು ಇವುಗಳ ಸಂಕಲನೆ ಬಹಳ ಇಷ್ಟ. ಇದನ್ನು ತಿಳಿದುಕೊಂಡೇ ಎಲ್ಲಿ ರಾಜನು ತಂಗಿದಾಗಲೂ ಅದನ್ನು ರಾಜನಿಗೆ ತಲುಪಿಸುವಂತೆ ಮಾಡುತ್ತಿದ್ದ. ದೊರೆಗೆ ಯಾವ ಹೊತ್ತಿನಲ್ಲಿ ಏನು ಮಾಡಬೇಕೆಂದು ತೋಚಿದರೂ ಅದಕ್ಕೆ ಸಹಾಯ ವಾಗಿಯೆ ಇರುತ್ತಿದ್ದ. ಏನೋ ಮಾತಿಗೆ ಬಂದು ದೊರೆ ಒಂದು ದಿನ ಕಾಶೀ ಯಾತ್ರೆಯ ವಿಚಾರ ಮಾತನಾಡುತ್ತ 'ಏನು ಮಂತ್ರೀ, ಊರಿನಲ್ಲಿರುವ ವಿಧವೆಯರೆಲ್ಲ ಕಾಶೀ ಪಟ್ಟಣಕ್ಕೆ ಹೋಗಿ ಅಲ್ಲೇ ವಾಸವಾಗಿದ್ದು ತಮ್ಮ ಜನ್ಮ ಸಾರ್ಥಕಮಾಡಿಕೊಂಡರೆ ನಮಗೂ ನಮ್ಮ ರಾಜ್ಯಕ್ಕೂ ದೊಡ್ಡ ಕೀರ್ತಿ ಬರ-ಬಹುದಲ್ಲವೆ?' ಎಂದು ಹೇಳಿದನು.

ಕೂಡಲೆ ರಾಜ್ಯದಲ್ಲೆಲ್ಲಾ ಡಂಗುರ ಹೊಡೆಸಿದ್ದಲ್ಲದೆ ಮಾರನೆಯ ದಿನವೇ ಮೂರು ಸಾವಿರ ವಿಧವೆಯರನ್ನು ತನ್ನ ಅಣ್ಣನ ಹೆಂಡತಿಯ ಕೈಕೆಳಗೆ (ಅಣ್ಣನ ಹೆಂಡತಿಯನ್ನು ಹೀಗೆ ಹೊರಗೆ ಹಾಕುವುದು ಒಳ್ಳೆ ಉಪಾಯವೆಂದು ಅವನಿಗೆ ತೋರಿತು.) ಕಾಶಿಗೆ ಕಳಿಸಿಬಿಟ್ಟ. ಈ ವೃತ್ತಾಂತವು ದೊರೆಗೆ ಬೇರೆ ರೀತಿಯಿಂದ ಮುಟ್ಟುವಂತೆ ಮಾಡಿದ.

'ಏನು ಮಂತ್ರೀ, ನಮ್ಮ ರಾಜ್ಯದಿಂದ ಮೂರು ಸಾವಿರ ವಿಧವೆಯರು ಕಾಶಿಗೆ ಹೋಗಿಬಿಟ್ಟರಂತೆ! ಅದರಲ್ಲಿ ನಿಮ್ಮ ಅಣ್ಣನ ಹೆಂಡತಿಕೂಡ ಹೋದ ಹಾಗೆ ತೋರುತ್ತೆ!'

'ಮಹಾಸ್ವಾಮಿಗಳ ಆಡಳಿತದಲ್ಲಿ ಇದೇನು ಅತಿ ದೊಡ್ಡದಲ್ಲ. ಇದು ಬಹಳ ದಿನಗಳ ಹಿಂದೆಯೆ ಆಗಬೇಕಾಗಿತ್ತು. ಆದರೆ ಇದಕ್ಕೆ ಮಹಾಸ್ವಾಮಿಗಳ ಅನುಗ್ರಹದಿಂದ ಕಾಲ ಈಗ ಒದಗಿತು.'

'ಬಹಳ ಸಂತೋಷ! ನಿನ್ನಂಥಾ ಮಂತ್ರಿಯಿರಬೇಕಾದರೆ ನನಗೂ ನನ್ನ ಪ್ರಜೆಗಳಿಗೂ ಯಾವುದಕ್ಕೆ ತಾನೆ ಕಡಿಮೆ!'

ಹಿರಣ್ಯಾಕ್ಷ ಇಷ್ಟು ಬುದ್ಧಿವಂತನಾಗಿದ್ದರೂ ಒಂದು ತಪ್ಪನ್ನು ಮಾಡಿದ್ದ. ಅವನು ಸಣ್ಣ ವಯಸ್ಸಿನ ಹುಡುಗಿಯನ್ನು ತನ್ನ ಎರಡನೆಯ ಹೆಂಡತಿಯನ್ನಾಗಿ

ಮಾಡಿಕೊಂಡಿದ್ದ. ದೊಡ್ಡ ಹೆಂಡತಿಗೂ ಅವನಿಗೂ ಮೂರು ವರ್ಷ ಮಾತ್ರ ವ್ಯತ್ಯಾಸ. ಸಣ್ಣವಳಿಗೂ ಅವನಿಗೂ ಮೂವತ್ತು ವರ್ಷಗಳಿಗಿಂತಲೂ ಹೆಚ್ಚಾಗಿ ವ್ಯತ್ಯಾಸ. ಒಂದು ಸಲ ಅವರಿಬ್ಬರನ್ನೂ ಕರೆದುಕೊಂಡು ರಕ್ಷಾವ್ಯಾಪಾರಕ್ಕಾಗಿ ಹೊರಟಿಸನಂತೆ ಮಂತ್ರಿ. ಆ ಕಾಲದಲ್ಲಿ ಎದುರಿಗೆ ಬಂದ ಆ ಪ್ರಾಂತ್ಯದ ಪೋಲೀಸಧಿಕಾರಿ, ಎರಡನೆಯ ಹೆಂಡತಿಯನ್ನು ನೋಡಿ 'ಏನು ಮಗಳಿಗೆ ಮದುವೆಯಾಗಿದೆಯೆ?' ಎಂದು ಕೇಳಿದನಂತೆ! ಅದನ್ನೇ ಜ್ಞಾಪಕದಲ್ಲಿಟ್ಟು-ಕೊಂಡಿದ್ದು ಆ ಪೋಲೀಸಧಿಕಾರಿಯನ್ನು ಗಡೀಪಾರುಮಾಡಿಸಿದನಂತೆ ಮಂತ್ರಿ.

ಎರಡನೆಯ ಮದುವೆ ಮಾಡಿಕೊಂಡ ಕಾಲದಲ್ಲಿ ಮೊದಲನೆಯವಳನ್ನೇ ಕೇಳಿ, ಅವಳ ಇಷ್ಟಕ್ಕನುಸಾರವಾಗಿ ಮಾಡಿಕೊಂಡಿದ್ದರೆ ತೊಂದರೆಯಾಗು-ತ್ತಿರಲಿಲ್ಲ. ನಾನು ಕೇಳಿದ್ದೇನೆ, ಕೆಲವರು ನಟರು ಹಾಗೆ ಮಾಡುತ್ತಾರಂತೆ; ಅವರು ತಮ್ಮ ಎರಡನೆಯ ಹೆಂಡತಿಯನ್ನು ಚುನಾಯಿಸಲು ಕನ್ಯಾಪರೀಕ್ಷೆಗಾಗಿ ತಮ್ಮ ಮೊದಲನೆಯ ಹೆಂಡಂದಿರನ್ನೇ ಕಳಿಸುವುದು ಈಗಲೂ ವಾಡಿಕೆಯಲ್ಲಿದೆ ಯಂತೆ! ಇದು ಬುದ್ಧಿವಂತರ ಲಕ್ಷಣ. ಪ್ರಕೃತ ಹಿರಣ್ಯಯ್ಯನ ಕೆಲಸ ಸರಿ ಹೋಗಲಿಲ್ಲ. ಮೊದಲನೆಯ ಹೆಂಡತಿಗೂ ಎರಡನೆಯ ಹೆಂಡತಿಗೂ ಮಧ್ಯೇಕ-ನಾಡಿಯಾಯಿತು. ಸಂಸಾರದಲ್ಲಿ ಒಡಕು ಬಂತು. ಒಬ್ಬಳಿಗೆ ಬಿಳಿ ಕೂದಲು ಕಂಡರಾಗದು, ಮತ್ತೊಬ್ಬಳಿಗೆ ಕರೀಕೂದಲು ಕಂಡರಾಗದು ಎಂಬಂತಾಯಿತು ಸಮಾಚಾರ. ಇದರಲ್ಲಿ ಇನ್ನೂ ವಿಶೇಷವಾದ ಸಂಗತಿ ಏನೆಂದರೆ, ಎರಡನೆ ಯವಳು ಮೊದಲನೆಯ ಹೆಂಡತಿಗಿಂತ ರೂಪವತಿಯಾಗಿದ್ದಳು. ಮಂತ್ರಿಯ ಪ್ರೇಮವೂ ಎರಡನೆಯವಳ ಕಡೆ ಇದ್ದುದು ಮೊದಲನೆಯವಳಿಗೆ ಗೊತ್ತಿತ್ತು.

ಒಂದು ದಿನ ಮಂತ್ರಿ ಆಸ್ಥಾನದಿಂದ ಮನೆಗೆ ಬರುವ ಹೊತ್ತಿಗೆ ಸಾಯಂಕಾಲವಾಗಿತ್ತು. ಬಂದ ಕೂಡಲೆ ಏನೋ ಹೆಚ್ಚಾದ ವಿಚಾರ ಅಲ್ಲಿ ನಡೆದಿರಬೇಕೆಂದು ತೋರಿತು. ತನ್ನ ಕೋಣೆಯಲ್ಲಿದ್ದ ಕನ್ನಡಿ ಪಟ ಎಲ್ಲಾ ಚೂರುಚೂರಾಗಿದ್ದ ಹಾಗೆ ತೋರಿತು. ಇದೇನೋ ವಿಚಾರಿಸೋಣ ಎನ್ನೋ ಕಾಲಕ್ಕೆ ಒಳಗಿನಿಂದ ಇಬ್ಬರೂ ಬಂದುಬಿಟ್ಟರು. ಒಟ್ಟಿಗೆ ಒಬ್ಬರ ಮಾತು ಇನ್ನೊಬ್ಬರಿಗೆ ಕೇಳಿಸದ ಹಾಗೆ ಗಟ್ಟಿಯಾಗಿ 'ಈ ಮನೆಯಲ್ಲಿ ಯಾವುದೂ ಇತ್ಯರ್ಥವಾಗುವ ವರೆಗೆ ನಮಗಿರುವುದಕ್ಕೆ ಸಾಧ್ಯವಿಲ್ಲ' ಎಂದು ಇಬ್ಬರೂ

ಒದರಿದರು. ಯಾರನ್ನು ಮೊದಲು ಮಾತಾಡಿಸಿದರೂ ಕಷ್ಟವೆಂದು ತಿಳಿದು ಮಂತ್ರಿ ಮೆಲ್ಲನೆ 'ಒಬ್ಬೊಬ್ಬರೇ ಹೇಳಿ' ಎಂದ. ದೊಡ್ಡವಳು ಹೇಳಿದಳು.

'ಇತ್ಯರ್ಥ ಮಾಡುತ್ತೇನೆ. ಒಳಕ್ಕೆ ಹೋಗು' ಎಂದ. ಅವಳು ಹೋದಳು. ಚಿಕ್ಕವಳನ್ನು ಕೂಡಿಸಿಕೊಂಡು ಕೇಳಿದ. ಇತ್ಯರ್ಥ ಮಾಡಿದ. ಮನೆಯ ಬಲಭಾಗವನ್ನು ದೊಡ್ಡವಳಿಗೂ ಎಡಭಾಗವನ್ನು ಚಿಕ್ಕವಳಿಗೂ ಮಾಡಿದ. ಇನ್ನು ಮೇಲೆ ಬಲಭಾಗದವರು ಎಡಭಾಗಕ್ಕೆ ಹೋಗಬಾರದು, ಎಡ ಭಾಗದವರು ಬಲಭಾಗಕ್ಕೆ ಹೋಗಬಾರದು ಎಂದು ಕಟ್ಟು ಮಾಡಿದ. ಇದರಿಂದ ದೊಡ್ಡ ಹೆಂಡತಿಯಾದ ಮಾಯಾಬಾಯಿಗೆ ಚಿಕ್ಕ ಹೆಂಡತಿಯಾದ ಚಿತ್ರಾ-ಬಾಯಿಯ ಮೇಲೆ ಮತ್ತಷ್ಟು ಅಸೂಯೆ ಹೆಚ್ಚಾಯಿತು.

ದೊಡ್ಡವಳು ಮಂತ್ರಿಯ ಹತ್ತಿರ ಎಷ್ಟು ಚಾಡಿ ಹೇಳಿದರೂ ಚಿಕ್ಕವಳು ಆಮೇಲೆ ಕೇವಲ ಒಂದು ನಗೆ ಒಂದು ಮುತ್ತು ಇವುಗಳಿಂದ ಹಾರಿಸಿಬಿಡು-ತ್ತಿದ್ದಳು. ಮಂತ್ರಿಯ ಮನಸ್ಸು ಚಿಕ್ಕವಳ ಮೇಲೆ ಇತ್ತು.

ಯುಗಾದಿ ಹಬ್ಬ ಬಂತು; ಅಂದರೆ ಇನ್ನು ಒಂದು ವಾರವಿದೆ ಎನ್ನುವ ಹೊತ್ತಿಗೆ ಮಂತ್ರಿ ಆ ಊರಿನ ಸಾಹುಕಾರ ಸೂರಸೆಟ್ಟಿಗೆ ಹೇಳಿಕಳಿಸಿದ. ಆತ ಬಂದ. ನಮಸ್ಕಾರಮಾಡಿದ.

'ಕೂಡಿರಿ ಸೆಟ್ಟರೆ' ಎಂದ ಮಂತ್ರಿ.

'ಇರಲಿ' ಎಂತ ಶೆಟ್ಟಿ ನಿಂತೇ ಇದ್ದ.

'ಹಾಗಲ್ಲ. ತಾವು ಕೂತುಕೊಳ್ಳಬೇಕು.' ಎಂದ ಮಂತ್ರಿ. ಶೆಟ್ಟಿ ಕೂತುಕೊಂಡ.

'ಸ್ವಾಮಿಯವರು ಹೇಳಿಕಳಿಸಿದರಂತೆ?'

'ಹೌದು ಶೆಟ್ಟರೆ—ಹೇಗಿದೆ ನಿಮ್ಮ ವ್ಯಾಪಾರ?'

ಶೆಟ್ಟಿಗೆ ಸ್ವಲ್ಪ ಆಲೋಚನೆ ಮಾಡುವ ಸಂದರ್ಭವೊದಗಿತು. ಚೆನ್ನಾ ಗಿದೆ ಎಂದರೆ ಮತ್ತೇನು ಹೊಸ ಕಟ್ಟಳೆ ತನ್ನ ತಲೆ ಮೇಲೆ ಬೀಳುತ್ತೋ! ಹೊಸ ತೆರಿಗೆ ಏನಾದರೂ ಕೊಡಬೇಕಾಗುತ್ತೋ ಅಥವಾ ನಜರನ್ನು ಒಪ್ಪಿಸ-ಬೇಕಾಗುತ್ತೋ! ಇಲ್ಲವೆಂದರೆ 'ನಮ್ಮ ಆಡಳಿತದಲ್ಲಿ ವ್ಯಾಪಾರವೇ ಇಲ್ಲ, ಎಂದು ಹೇಳುತ್ತೀರಲ್ಲವೆ?' ಎಂದು ಮಂತ್ರಿ ಕೋಪಿಸಿಕೊಂಡರೂ ತನಗೆ ಕಷ್ಟವೆ ಸರಿ ಹೀಗಾಗಿ 'ಏನೋ ಎಲ್ಲಾ ತಮ್ಮ ದಯೆ' ಎಂದ ಶೆಟ್ಟಿ.

'ಅಲ್ಲ, ತಾವೇನೋ ವಜ್ರಕರೂರಿಗೆ ಹೋಗಿದ್ದಿರಿ ಎಂಬೋ ವರ್ತಮಾನ ನನಗೆ ಬಂತು.'

'ಹೌದು ಸ್ವಾಮಿ, ಹೋದ್ದುದೇನೋ ನಿಜ. ಆದರೆ ಈ ಸಲ ಅಷ್ಟು ಅಮೂಲ್ಯವಾದ ವಜ್ರ ನನಗೆ ಸಿಗಲಿಲ್ಲ.'

'ಇರಲಿ, ಏನಾದರೂ ಸಿಕ್ಕಿತಲ್ಲವೆ?'

'ಏನೂ ಇಲ್ಲ ಎಂದು ಹೇಳುವುದಕ್ಕಾದೀತೆ ತಮ್ಮ ಅಡಳಿತದಲ್ಲಿ!'

'ಸರಿ, ಮುಂದಿನ ಯೋಚನೆ?'

'ಅದೂ ಸ್ವಾಮಿಗಳಿಗೆ ತಿಳಿದಿರುವುದೇ. ಸಿಕ್ಕಿದವುಗಳನ್ನು ಬನವಾಸಿಗೆ ತೆಗೆದುಕೊಂಡು ಹೋಗಬೇಕೆಂದಿದ್ದೇನೆ.'

'ಅದಕ್ಕಿಂತಲೂ ತಗರಕ್ಕೆ ಹೋದರೆ ಒಳ್ಳೆಯದಲ್ಲವೆ? ನನಗೆ ತಿಳಿಯದು. ನಿಮ್ಮ ಅನುಭವ ಕೇಳುತ್ತಿದ್ದೇನೆ.'

'ಸ್ವಾಮಿಗಳಿಗೆ ತಿಳಿಯದೆ ಇರುವುದೇನಿದೆ! ತಗರದಲ್ಲಿ ನಮಗೆ ಬೇಕಾದ ಸರಕು ಸಿಗುವುದು ಕಷ್ಟ. ಬನವಾಸಿಯಲ್ಲಾದರೆ ಅನುಕೂಲ. ಕಾಶಿಯಿಂದ ವರ್ತಕರು ಬರುತ್ತಾರೆ. ಪೀತಾಂಬರಾದಿಗಳ ವ್ಯಾಪಾರ ಹೆಚ್ಚಾಗಿ ನಡೆಯುತ್ತೆ.'

'ಪುಲಕಿತದಲ್ಲಿ ಪೀತಾಂಬರಗಳ ವ್ಯಾಪಾರವು ಹೆಚ್ಚೆಂದು ನಮಗೆ ತಿಳಿದಿತ್ತು.'

'ಅಲ್ಲಿಯ ಪೀತಾಂಬರವು ಮೈಲಾರಕ್ಕೆ ಹೋಗುತ್ತದೆ. ಆದರೆ ಅತಿ ಶ್ರೇಷ್ಠತರವಾದದ್ದು ಬನವಾಸಿಯಲ್ಲೇ ಸಿಗೋದು ಸ್ವಾಮಿ. ಅಲ್ಲದೆ, ಬನವಾಸಿಯಲ್ಲಿ ನಮ್ಮ ಜನ ಹೆಚ್ಚು. ನನ್ನ ಮಗಳನ್ನು ಅಲ್ಲಿಗೇ ಕೊಟ್ಟಿದ್ದೇನೆ.'

'ಸರಿ ಶೆಟ್ಟರೆ, ನಿಮ್ಮಿಂದ ಒಂದು ಕೆಲಸವಾಗಬೇಕಲ್ಲ?'

'ಅದಕ್ಕೇನು, ಸ್ವಾಮಿಗಳು ಕಿರುಬೆರಳಿಂದ ತೋರಿಸಿದ್ದು ನಾನು ಶಿರಸಾ ವಹಿಸಿ ಮಾಡುತ್ತೇನೆ.'

'ಬಹಳ ಗೌಪ್ಯವಾಗಿ ಮಾಡಬೇಕು.'

'ಆಗಬಹುದು, ಸ್ವಾಮಿಗಳು ಅಪ್ಪಣೆ ಕೊಡೋಣವಾಗಲಿ.'

'ಅಲ್ಲದೆ ನನಗೆ ಅತಿ ಉತ್ತಮವಾದ ಕಾಶಿಯ ಪೀತಾಂಬರ ಬೇಕು,

ನನ್ನ ಎರಡನೆಯವಳಿಗಾಗಿ. ಅದು ಈ ಯುಗಾದಿ ಹೊತ್ತಿಗೆ ನನ್ನ ಕೈ ಸೇರ-ಬೇಕು.'

'ಆಗಬಹುದು ಸ್ವಾಮಿ '

'ಬೆಲೆ ಎಷ್ಟಾದರೂ ಪರವಾಯಿಲ್ಲ. ಮತ್ತೊಂದು ವಿಚಾರ, ಅದನ್ನು ಯಾರು ಯಾರಿಗಾಗಿ ಕೊಂಡುಕೊಂಡರು ಎಂದು ಯಾರಿಗೂ ತಿಳಿಯಬಾರದು. ಅದನ್ನು ನನ್ನ ಅಕ್ಕನವರು ಚಿತ್ರಾಬಾಯಿಗಾಗಿ ಕಳಿಸಿದಂತಾಗಬೇಕು.'

'ಅಂದರೆ ಸ್ವಾಮಿಯವರು ನನ್ನನ್ನು ಗೇರಸೊಪ್ಪೆ ಮಾರ್ಗವಾಗಿ ಬರ-ಬೇಕೆಂದು ಅಪ್ಪಣೆಕೊಡಿಸಿದ ಹಾಗಾಯಿತು.'

'ಬಹಳ ಬುದ್ಧಿವಂತನಯ್ಯ, ನೀನು! ನಿನಗೆ ನಾನು ಇದೆಲ್ಲ ಹೇಳಿಕೊಡ ಬೇಕೇ?'

'ಎಲ್ಲಾ ಸ್ವಾಮಿಗಳ ವಿಶ್ವಾಸ.'

'ಅಲ್ಲವಯ್ಯ, ಇಷ್ಟು ಇಂಗಿತಜ್ಞನಲ್ಲದಿದ್ದರೆ ಮಾಳವ, ಕಳಿಂಗ, ಚೋಳ ಮುಂತಾದ ರಾಜರಿಗೆ ಬೇಕಾದುದನ್ನು ಏಕಕಾಲದಲ್ಲಿ ಕೊಡುವ ಯೋಗ್ಯತೆ ನಿನಗೆ ಬರುತ್ತಿತ್ತೆ?'

'ತಮ್ಮ ಮತ್ತು ನಮ್ಮ ದೊರೆಗಳ ಪ್ರಭುತ್ವದಲ್ಲಿ ನನ್ನಂತಹ ವ್ಯಾಪಾರಿ ಗಳು ಎಷ್ಟೋ ಇದ್ದಾರೆ. ತಾವು ನನ್ನ ಮೇಲೆ ವಿಶ್ವಾಸವನ್ನಿಟ್ಟು ಈ ಮಾತನ್ನು ಹೇಳುತ್ತಿದ್ದೀರಿ ಅಷ್ಟೆ. ನಾನು ನಿಮ್ಮ ದಾಸಾನುದಾಸರಲ್ಲಿ ಒಬ್ಬ ಕಿರಿಯವ.'

'ಅಯ್ಯ, ನಿನ್ನ ಯೋಗ್ಯತೆ, ನಿನ್ನ ಘನತೆ, ಮನಸ್ಸು ಎಲ್ಲಾ ನನಗೆ ತಿಳಿದಿದೆ. ಈ ಯುಗಾದಿಯಲ್ಲಿ ದೊರೆಗಳು ಬಿರುದುಗಳನ್ನು ಹಂಚುವ ಕಾಲ ದಲ್ಲಿ ಏನೋ ವಿಚಾರವನ್ನು ಕೇಳಿದರು ನನ್ನ.'

'ಸ್ವಾಮಿಗಳು ಸಲಹೆ ಕೊಡಬೆ ಅವರಿಗೆ ಮತ್ತಾರು ಕೊಡುವವರು ಹೋಗಿ ಬರತೇನೆ ದಯವಿರಲಿ.'

ಶೆಟ್ಟಿ ನಮಸ್ಕಾರಮಾಡಿ ಹೊರಟುಹೋದ.

ಶಾತವಾಹನರ ಕಾಲದಿಂದಲೂ ಆ ಊರಿನಲ್ಲಿ ವರ್ತಕ ಸಂಘಗಳಿದ್ದವು. ಕೆಲವು ಬ್ರಾಹ್ಮಣರೂ ವ್ಯಾಪಾರ ಮಾಡುತ್ತಿದ್ದರು. ಅವರಲ್ಲಿ ಕೆಲವರು

ದ್ವೀಪಾಂತರಗಳಿಂದ ಆನೆ ಕುದುರೆ ಮುತ್ತು ಇವುಗಳನ್ನು ತರಿಸಿ ಅರಸರಿಗೆ ಮಾರುತ್ತಿದ್ದರು. ಅವರ ಪೈಕಿ ಈ ಸೂರಶೆಟ್ಟಿ ಒಬ್ಬ ಹೆಸರುವಾಸಿಯಾದ ವರ್ತಕನಾಗಿದ್ದನು.

ಹೆಂಗಸರಿಗೆ ತರ್ಕದ ಮೂಲಕವಾಗಿ ವಿಚಾರವು ಹೆಚ್ಚಾಗಿ ತಿಳಿಯದೆ ಇದ್ದಾಗ ದೇವರು ಅವರಿಗೆ ಒಂದು ಅಸಾಧಾರಣಶಕ್ತಿಯನ್ನು ಕೊಟ್ಟಿ-ದ್ದಾನೆ. ಸಾಮಾನ್ಯವಾಗಿ ಮುಂದಾಲೋಚನೆ ಅವರಿಗೆ ಹೆಚ್ಚಾಗಿರುತ್ತದೆ. ಯಾವ ವಿಚಾರದಲ್ಲೂ ಅವರಿಗೆ ಒಂದು ಆರನೆಯ ಇಂದ್ರಿಯವು—ಮನಸ್ಸು ಎನ್ನೋಣವೆ ಅದನ್ನು? ಅವರಿಗೆ ಕೆಲವು ವಿಚಾರಗಳನ್ನು ಸ್ಪಷ್ಟವಾಗಿ ಹೇಳುವ ಹಾಗೆ ತೋರತ್ತೆ. ಸೂರಶೆಟ್ಟಿ ಮನೆಗೆ ಬಂದ ಕೂಡಲೆ ಮಾಯಾ-ಬಾಯಿಗೆ ಹೊಳೆಯಿತು. ಹಿರಣ್ಯಯ್ಯ ಯುಗಾದಿಗಾಗಿ ಈತನನ್ನು ಕರೆಸಿರ ಬೇಕು ಎಂದ. ಅಷ್ಟಕ್ಕೆ ಸುಮ್ಮನಾಗಲಿಲ್ಲ. ಆಕೆ ವಿಚಾರವನ್ನೆಲ್ಲಾ ಚೆನ್ನಾಗಿ ತಿಳಿದುಕೊಳ್ಳಬೇಕೆಂದು ಪ್ರಯತ್ನಪಟ್ಟಳು.

ಹೊಂಚು ಹಾಕಿ ಕೇಳುವುದನ್ನು ಅವಳಿಗೆ ಯಾರೂ ಹೇಳಿಕೊಡಬೇಕಾ ಗಿರಲಿಲ್ಲ. ಹಿರಣ್ಯಯ್ಯ ಹೇಳಿದ ಮಾತುಗಳೆಲ್ಲಾ ಅವಳ ತಲೆಯಲ್ಲಿ ಚೆನ್ನಾಗಿ ನಾಟಿದವು. ಮೊಟ್ಟಮೊದಲು ತನಗೂ ಏನಾದರೊಂದು ಬರಬಹುದು ಎಂದಿತ್ತು ಅವಳ ಮನಸ್ಸಿನಲ್ಲಿ. ಆದರೆ ಈ ಸಲ ಯುಗಾದಿಯ ಹಬ್ಬ ತನ್ನ ಸವತಿ ಚಿತ್ರಾಬಾಯಿಗೊಬ್ಬಳಿಗೇ ಎನ್ನುವಂತೆ ತೋರಿತು. ಸೂರಶೆಟ್ಟಿ ಅಲ್ಲಿಂದ ಹೋಗಲೆಂದು ಕಾದಿದ್ದಳು.

ಆ ಶೆಟ್ಟಿ ಹೊರಟುಹೋದ ತರುವಾಯ ಹಿರಣ್ಯಯ್ಯನನ್ನು ತಾನು ಪ್ರತಿ ಭಟಿಸಿ ನಿಂತಳು. ಆ ಕೋಣೆಯೊಳಕ್ಕೆ ಹೋದಳು. ಹಿರಣ್ಯಯ್ಯ ಏನೋ ನೋಡುತ್ತ ಕುಳಿತಿದ್ದ.

'ಏನೋ ಬಹಳ ಕೆಲಸದಲ್ಲಿರುವ ಹಾಗಿದೆ!' ಎಂದಳು ಮಾಯಾಬಾಯಿ.

ಅವಳು ಬಂದಿದ್ದು ಹಿರಣ್ಯಯ್ಯನಿಗೆ ಗೊತ್ತಿತ್ತು. ಆದರೆ ಅವಳನ್ನು ಆಗ ಮಾತಾಡಿಸಲು ಆತನಿಗೆ ಇಷ್ಟವಿರಲಿಲ್ಲ. ಏನೋ ಒಂದು ಪುಸ್ತಕ ಅಲ್ಲಿ ಕಾಗದ ಇವುಗಳನ್ನು ತೆಗೆದುಕೊಂಡು ರಾಜಕಾರ್ಯದಲ್ಲಿ ನಿರತನಾದಂತೆ ಕುಳಿತಿದ್ದ. ಹಿರಣ್ಯಯ್ಯ ತಲೆಯೆತ್ತಿ ಕೂಡ ನೋಡದೆ 'ಕೆಲಸಕ್ಕೆ ಕೊನೆ-ಮೊದಲಿಲ್ಲದ ಹಾಗೆ ಕಾಣುತ್ತೆ!'

'ಹಾಗೇ ಕಾಣುತ್ತೆ! ನಾನು ಬಂದಾಗಲೆಲ್ಲ ನಿಮಗೆ ರಾಜಕಾರ್ಯ!'

'ನೀನು ಬಂದರೇನು? ಯಾರು ಬಂದರೂ ಅಷ್ಟೆ.'

'ಎಲ್ಲಾದರೂ ಉಂಟೆ? ಈಗ ತಾನೆ ಸೂರಶೆಟ್ಟಿ ಬಂದ ಹಾಗಿತ್ತು.'

'ಅದೂ ರಾಜಕಾರ್ಯವೇ.'

ತನ್ನ ಮನಸ್ಸಿನಲ್ಲಿ ಹಿರಣ್ಮಯಿ ಮದ್ದುಗುಂಡು ಸಿದ್ಧಮಾಡಿಕೊಂಡ ಯುದ್ಧಕ್ಕೆ. ಅವನಿಗೆ ತೋರಿತು, ಆಕೆ ತನ್ನ ಮಾತುಗಳನ್ನೆಲ್ಲಾ ಕೇಳಿರ ಬೇಕೆಂದು.

'ನೀವು ರಾಜರ ಮನುಷ್ಯರು. ಯಾರು ಬಂದರೂ ರಾಜಕಾರ್ಯಕ್ಕೇ. ನೀವೇನು ಹೇಳಿದರೂ ರಾಜಕಾರ್ಯವೇ!'

'ಏನು, ನಾನು ಹೇಳುತ್ತಿರುವುದು ಸುಳ್ಳೇ?'

'ಏತಕ್ಕೆ ಕೋಪಮಾಡಿಕೊಳ್ಳುತ್ತೀರಿ! ನೀವು ನನ್ನೊಡನೆ ಯಾವಾಗ ನಿಜ ಹೇಳಿದ್ದೀರಿ?'

'ಇದೀಗ ಚೆನ್ನಾಯಿತು. ನನಗೆ ಕೆಲಸ ಬಹಳವಿದೆ. ಕೂತುಕೊಂಡು ಮಾತನಾಡಿ ಬೇಗ ಮುಗಿಸು—ಇಲ್ಲವಾದರೆ.'

'ಹೌದು ಗೊತ್ತೇಯಿದೆ,—ಹೋಗು.'

'ಇಷ್ಟು ಚಾಲಕ್ಕಿಲ್ಲದಿದ್ದರೆ ನನ್ನನ್ನು ಹೀಗೆ ಆಳುವುದಕ್ಕೆ ನಿನಗೆ ಸಾಧ್ಯ ವಾಗುತ್ತಿತ್ತೆ?'

'ಪಾಪ, ನಾನು ಹೇಳಿದ ಹಾಗೇ ಈಗ ತಾವು ಕೇಳುತ್ತಿರುವುದು! ಈ ಮನೆಯಲ್ಲಿ ನನ್ನ ಪಾಡು, ನಾಯಿಗೂ ಬೇಡ.'

'ಇದೇ ನನಗೆ ಬೇಡ ಎನ್ನಿಸೋದು! ಇಲ್ಲ ವ್ಯಾಜ್ಯವಾಡುತ್ತೀ, ಇಲ್ಲ ಅಳುತ್ತೀ! ಸಹಜವಾಗಿ ಮಾತನಾಡುವುದಕ್ಕೇ ನಿನಗೆ ಬರುವಂತೆ ತೋರಲಿಲ್ಲ.'

'ನನ್ನ ಮುಖ ನೋಡಿದರೇ ನಿಮಗೆ ಹಾಗೆ ಕಾಣುತ್ತೆ! ನನ್ನ ಧ್ವನಿ ಯಾವಾಗಲೂ ನಿಮ್ಮ ಕಿವಿಗೆ ಅತ್ತ ಹಾಗೇ ಇರೋದು! ಬೇರೆಯವರ ಧ್ವನಿ ಯಾದರೆ ವೀಣೆ!'

'ಮೊದಲಾಯಿತು!'

'ನೀವೇ ಮೊದಲು ಮಾಡಿದಿರಿ. ನಾನೀಗ ನಿಮ್ಮ ಮೇಲೆ ಕೋಪಿಸಿಕೊಳ್ಳಲೂ ಇಲ್ಲ, ಅಳಲೂ ಇಲ್ಲ. ನೀವೇ ಏನೇನೋ ಮಾತಾಡಿ - ನಾನು ಹೇಳೋದನ್ನು ಕೇಳೋದಕ್ಕೆ ಮೊದಲೆ ನನ್ನನ್ನು ಈ ಅವಸ್ಥೆಗೆ ತಂದಿರಿ!'

'ಮುಖ್ಯವಾಗಿ, ತಪ್ಪು ಹಿಡಿಯಬೇಕೆಂದೇ ಇದ್ದರೆ ಏನು ಮಾತನಾಡಿದರೂ ತಪ್ಪೇ!'

'ಅದೇ ನಾನು ನಿಮ್ಮ ಮುಂದೆ ಇದುವರೆವಿಗೂ ಹೇಳುತ್ತಿರುವುದು.'

'ಇರಲಿ, ಬಂದ ವಿಚಾರ?'

'ಅಲ್ಲ, ನಿಮ್ಮನ್ನು ವಿಚಾರವಿದ್ದರೇನೆ ನಾನು ಮಾತನಾಡಿಸುವುದು ಎಂದು ನಿಮ್ಮ ಅಭಿಪ್ರಾಯ!'

'ಆ ಮಾತು ನಾನು ಹೇಳಲಿಲ್ಲವಲ್ಲ!'

'ಇಲ್ಲ, ಬಾಯಿಂದ ಹೇಳಲಿಲ್ಲ, ನಿಮ್ಮ ಧ್ವನಿಯಿಂದ ಸೂಚಿಸಿದಿರಿ.'

'ಓಹೋ, ಬಾಯಿಯವರಿಗೆ ಧ್ವನಿವಿಚಾರ ಕೂಡ ತಿಳಿದಹಾಗೆ ಕಾಣುತ್ತೆ!'

'ತಮ್ಮ ಧರ್ಮಪತ್ನಿಯಾದಮೇಲೆ ಧ್ವನಿವಿಚಾರ ತಿಳಿದುಕೊಳ್ಳದೆ ಇರೋದಕ್ಕೆ ಆಗುತ್ತದೆಯೆ?'

'ಇದು ಧ್ವನಿಯೊಂದೇ ಅಲ್ಲ, ರಸವೂ ಇದ್ದ ಹಾಗಿದೆ!'

'ನಿಮಗೆ ನನ್ನಲ್ಲಿ ರಸ ಹೇಗೆ ತೋರಬೇಕು?'

'ಏನೋ ಕಾವ್ಯಕ್ಕೆ ಈಗ ಮೊದಲಾಯಿತೋ ಏನೋ! ಮಾಯಾದೇವಿ, ಅತಿ ಚಮತ್ಕಾರಮಯ ಕಾವ್ಯ ಹೇಳುವಂತಿದೆ........ಸಾಲಂಕಾರಸ್ಯಕಾವ್ಯತಾ । ಶಬ್ದಾರ್ಥೌ ಸಹಿತೌ ವಕ್ರಕವಿವ್ಯಾಪಾರಶಾಲಿನೀ ।'

'ಸಕ್ಕರೆಯ ಮಾಧುರ್ಯವು ಗೊತ್ತಾಗಬೇಕಾದರೆ ಅದು ನಾಲಿಗೆಯ ಮೇಲೆ ಬೀಳಬೇಕು. ಹಾಗೇ ಈ ರಸವು ನನ್ನಲ್ಲಿಲ್ಲ; ಸಾಮಾಜಿಕರಲ್ಲೇ ಇದೆ!'

'ಸಾಮಾಜಿಕಾಸ್ತು ಲಿಹತೇ ರಸಾನ್ ಪಾತ್ರಂ ನೇಮೋ ಮತಃ — ಎಂಬ ಸಂಗೀತರತ್ನಾಕರದಲ್ಲಿರುವ ಶ್ಲೋಕಕ್ಕೆ ಇದು ಹೊಸ ವ್ಯಾಖ್ಯಾನವಿದ್ದ ಹಾಗೆ ತೋರುತ್ತೆ! — ಇದು ತಮಗೆ ಅನುಭವಕ್ಕೆ ಬಂದಿದ್ದು ಯಾವಾಗಲೋ!'

'ತಾವು ಮಾಧವಪ್ರೊತಿಯ ರ ಕುಸ್ತಿಯನ್ನು ನೋಡುವುದಕ್ಕಾಗಿ ನಮ್ಮನ್ನು ?ಸಿದರಲ್ಲ, ಅಂದಿನಿಂದ ನನಗೆ ರಸಧ್ವನಿಗಳಲ್ಲಿ ಬಹಳ ಕುತೂಹಲ ಹುಟ್ಟಿದೆ.'

'ಎಂದರೆ ಮಾಧವಪ್ರೊಡೆಯರ ಕುಸ್ತಿ ತಮ್ಮ ಮೇಲೆ ಅಂತಹ ಪರಿಣಾಮ ನ್ನುಂಟುಮಾಡಿತೇನೋ!'

'ನನ್ನ ಮೇಲೆ ಪರಿಣಾಮವನ್ನುಂಟುಮಾಡಿದರೆ ನನಗೆ ಗೋಚರವಾಗು ದು ಹೇಗೆ? ನಟನು ನಟನೆಮಾಡುತ್ತಿದ್ದರೆ ಆವನಿಗೆ ತಿಳಿಯುವುದು ಅದರ ಚಾರ ಹೇಗೆ? ಆಚೆ ಇರುವವರು ನಟನೆಯನ್ನು ನೋಡಬೇಕು—ಅದರ ಚಾರ ತಿಳಿಯುವುದಕ್ಕೆ.'

'ನನಗೆ ಏನೂ ಅರ್ಥವಾಗಲಿಲ್ಲ. ಸರಿಯಾಗಿ ಹೇಳಬಾರದೆ?'

'ರಾಜಕಾರ್ಯದ ತೊಡಕುಗಳನ್ನು ಬಿಡಿಸುವ ತಮ್ಮ ಬುದ್ಧಿಗೆ ಮನೆ ಎಲ್ಲಿರುವ ತೊಡಕುಗಳು ತೋರುವುದಿಲ್ಲ ನಾನು ಅನೇಕ ವೇಳೆ ತಮಗೆ ೯ಳುತ್ತಿದ್ದೇನೆ-ಬೇಡಿಕೊಳ್ಳುತ್ತಿದ್ದೇನೆ, ಮನೆಯಲ್ಲಿನ ಶಿಸ್ತು ಸರಿಯಾಗಿರಬೇಕಾ ರೆ ನನ್ನ ಯಜಮಾನಿಕೆಯನ್ನು ನೀವು ಒಪ್ಪಬೇಕೆಂದು. ನಿಮ್ಮ ಮನಸ್ಸೆಲ್ಲಾ ಚಿತ್ರದ ಮೇಲಿವೆ! ಒಂದು ಮಸಿ ಆ ಚಿತ್ರವನ್ನೆಲ್ಲಾ ಕೆಡಿಸಬಹುದೆಂಬ ಚಾರ ತಮಗಿನ್ನೂ ತಿಳಿಯಲಿಲ್ಲ. ಎಲ್ಲಿ ಯಾರೊಡನೆ ಏನು ಮಾತಾಡಿದರೂ ಚಿತ್ರ....'

'ಸಾಕು, ಸವತಿಮತ್ಸರ!'

'ಇರಲಿ, ತಾವು ಸೂರಶೆಟ್ಟಿಗೆ ಹೇಳಲಿಲ್ಲವೆ, ಯುಗಾದಿಗೆ ಅವಳಿಗೆ ೯ತಾಂಬರ ಬೇಕು ಅಂತ!'

'ಪೀತಾಂಬರ!'

'ಹೌದು, ಕಾಶೀ ಪೀತಾಂಬರ—ಬನವಾಸಿಯಿಂದ.'

'ಚೆನ್ನಾಯಿತು!'

'ಇರಲಿ, ತಾವು ಕೊಂಡುಕೊಂಡು ತಮ್ಮ ಅಕ್ಕನವರ ಹೆಸರಿನಲ್ಲಿ ತ್ರಕ್ಕೆ ಕೊಡಬೇಕು, ಅಂತೇನೆ!'

'ಅಕ್ಕನವರು!'

'ಹೌದು—ಗೆರಸೊಪ್ಪೆ ಮುಖಾಂತರವಾಗಿ ಇಲ್ಲಿಗೆ ಬರಬೇಕು ಆ ೯ತಾಂಬರ!'

'ಇದೆಲ್ಲ, ನಿನಗೆ ಹೇಳಿದವರು ಯಾರೆ?'

'ಯಾವುದೋ ಒಂದು ಗುಬ್ಬಿ!'

'ಆ ಗುಬ್ಬಿ ಸುಳ್ಳು ಹೇಳಿದೆ. ಅದನ್ನು ನಂಬಬೇಡ.'

'ಸರಿಯೆ, ನಾನೇ ಈ ಕಿವಿಯಾರ ಕೇಳಿದೆ. ನನಗೇನು ಬೇಕು! ಅವಳಿಗೇ ಎಲ್ಲಾ ಕೊಡಿ. ಆದರೆ ನಿಮ್ಮ ಹೆಸರು ಕೆಡದಂತೆ ನೋಡಿಕೊಳ್ಳಿ! ನಾನು ಬರತೇನೆ.'

'ಎಲೆ, ಎಲೆ, ನಿಲ್ಲೆ. ನಿಮ್ಮ ಹೆಸರು—ಕೆಡೋದು, ಇದೆಲ್ಲಾ ಏನೇ?'

'ಏನೂ ಇಲ್ಲ, ನಾನು ಹೇಳಿದರೆ ಮತ್ಸರ!'

'ಇಲ್ಲ, ಹೇಳು.'

'ಆ ಮಾಧವವೊಡೆಯನನ್ನೇ ಕೇಳಿ!'

'ಮಾಧವವೊಡೆಯರು—ಅವರಿಗೂ ನನಗೂ ಯಾವ ಸಂಬಂಧ?'

'ಯಾವ ಸಂಬಂಧವೂ ಇಲ್ಲ! ಆದರೆ ಆತ ನಿಮ್ಮ ಜನಾನಾಕ್ಕೆ ಅಡ್ಡಿಯಿಲ್ಲದೆ ಬರುತ್ತಿದ್ದಾನೆ.'

'ಅಂದರೆ!!'

'ಅಂದರೆ, ಆತನ ಕುಸ್ತಿ ನೋಡಿದಾಗಿನಿಂದ ನಿಮ್ಮ ಚಿತ್ರ ಅವನನ್ನು... ಬಹಳ ವಿಶ್ವಾಸದಿಂದ ನೋಡುತ್ತಿದ್ದಾಳೆ. ಏನಾದರೂ ಮಾಡಿಕೊಳ್ಳಿ! ಆ ರಸಪ್ರಪಂಚ ನನಗೇಕೆ?'

ಹೀಗೆನ್ನುತ್ತ ಮಾಯಾಬಾಯಿ ತನ್ನ ಅಂತಃಪುರಕ್ಕೆ ಹೊರಟುಹೋದಳು.

೨

'ವಿಜಯ, ನೀನು ಹೇಳೋದೇನೋ ಸರಿ. ಆದರೆ ಈಗ ನಾನು ಅಲ್ಲಿಗೆ ಹೋಗದೆ ಹೇಗಿರಲಿ?' ಎಂದ ಮಾಧವವೊಡೆಯ.

'ಇರಲಿ ಪ್ರಭುಗಳೆ, ನಾನು ಹೇಳುವುದನ್ನು ನೀವು ಕೇಳಬೇಕು. ತಮಗಾಗಿ ಬೆಳೆದಿರುವ ದೇಹ ತಮಗಾಗಿ ಕೊಡಲು ಸಿದ್ಧನಾಗಿದ್ದೇನೆ ಆದರೆ ಆ ಮಂತ್ರಿಯ ಮನೆಗೆ ತಾವು ಹೋಗಬಾರದು. ನಿಮ್ಮ ತಾತಂದಿರಿಗೆ ನಮ್ಮ ತಂದೆಯವರು

ಮಂತ್ರಿಯಾಗಿದ್ದರು. ತಮಗೆ ನಾನು ಈಗ ಮಂತ್ರಿ ಎಂದು ತಾವು ಅಪ್ಪಣೆಕೊಡಿಸಿದ್ದೀರಿ. ತಮ್ಮ ಶ್ರೇಯಸ್ಸೇ ನನ್ನ ಶ್ರೇಯಸ್ಸು. ನೋಡಿದವರು ತಮ್ಮ ಹೆಸರಿಗೆ ಕಳಂಕವನ್ನೆ ತರುತ್ತಾರೆ' ಎಂದ ವಿಜಯ.

'ಕಳಂಕ! ಇದರಲ್ಲಿ ಕಳಂಕವೇನಿದೆ?'

'ಸರಿಯೆ, ತಮ್ಮಂತಹ ಉದಾರಹೃದಯರಿಗೆ ಕಳಂಕವಿಲ್ಲ. ಆದರೆ ಜನ........'

'ನಾನು ಚಿತ್ರಾಬಾಯಿಯೊಡನೆ ಮಾತನಾಡಿದರೆ ತಪ್ಪೇನು?'

'ತಮ್ಮ ಹೃದಯಕ್ಕೆ ತಪ್ಪೇನೂ ಇಲ್ಲ. ಆದರೆ ಜನ ಆಕೆಯ ಪವಿತ್ರತೆಗೆ ಕಳಂಕವನ್ನು ತರುವ ಮಾತನಾಡುತ್ತಾರೆ.'

'ಇದರಿಂದ ಆಕೆಗೆ ಕೆಟ್ಟ ಹೆಸರು ಬರುತ್ತದೆ, ಎಂದಲ್ಲವೆ?'

'ಹೌದು ಪ್ರಭೂ, ಅಲ್ಲದೆ....'

'ಅವರ ಮನೆತನ ಕೇವಲ ಸಾಮಾನ್ಯ, ತಾವಾದರೋ ಒಡೆಯರು.

'ಇರಲಿ, ವಿಜಯ ನೋಡು, ಗುಣವು ಮುಖ್ಯ. ಎಲ್ಲಿ ಗುಣವಿರುತ್ತದೆಯೋ ಅಲ್ಲಿ ಸಾಮಾನ್ಯವಾಗಿ ಮನೆತನವಿರುತ್ತೆ!'

'ಪ್ರಭೋ!'

'ಅದೇ—ನನ್ನನ್ನು ಹಾಗೆ ಕರೆಯಬೇಡ. ನಾನು ದೊರೆಯಾಗುವ ಹೊತ್ತು ಬಂದಾಗ ನೀನು ಹಾಗೆ ಕರೆಯಬಹುದು.'

'ಅಂದೇ ನನ್ನ ಸಂತೋಷದ ಪರಮಾವಧಿ!'

'ಸದ್ಯದಲ್ಲಿ ಈ ವಿಚಾರಕ್ಕೆ ನಾನೇನು ಮಾಡುವುದಕ್ಕೂ ಆಗುವುದಿಲ್ಲ ಇವತ್ತು ಕೇಳಿಬಿಡುತೇನೆ.'

ಅಷ್ಟು ಹೊತ್ತಿಗೆ ಮಾಧವವೊಡೆಯನನ್ನು ನೋಡಲು ಶ್ರೀಪತಿ ಬಂದ. ಶ್ರೀಪತಿಯು ಆ ಊರಿನಲ್ಲಿ ನಾಲ್ಕು ಜನರಿಗೆ ಬೇಕಾದ ಪಾಳೆಯಗಾರ. ಊರಿನಲ್ಲಿ ಯಾವ ಕೆಲಸವಾಗಬೇಕಾದರೂ ಅವನ ಸಲಹೆಯಿಲ್ಲದೆ ಆಗುತ್ತಿರಲಿಲ್ಲ. ಶ್ರೀಣಿಗಳಲ್ಲಿಯೂ ಆತನ ಹೆಸರಿಗೆ ಗೌರವವಿತ್ತು. ಸಾಮಾನ್ಯವಾಗಿ ಆತನು ನೋಡುವುದಕ್ಕೆ ಬಂದನೆಂದರೆ ಏನೋ ಮಹತ್ತರವಾದ ವಿಚಾರವೇ ಇರ

ಬೇಕೆಂದು ಮಾಧವವೊಡೆಯನು ತಿಳಿದ. ಮರ್ಯಾದೆಯಿಂದ ಅ
ನೋಡಿದ. ಸುಖಾಸನದಲ್ಲಿ ಕುಳ್ಳಿರಿಸಿದ.

'ತಮ್ಮೊಡನೆ ಮಾತನಾಡುವುದಿದೆ' ಎಂದು ಶ್ರೀಪತಿ ಮೆಲ್ಲನೆ ವಿಜಯನ ಕಡೆಗೆ ನೋಡಿದ.

'ಪರವಾಯಿಲ್ಲ, ಒಡೆಯರೆ, ವಿಜಯ ನನ್ನ ಆಪ್ತಬಂಧು, ಹೇಳಿ' ಮಾಧವವೊಡೆಯ.

'ಈಗ ಹದಿನೈದು ವರುಷಗಳ ಹಿಂದೆ ಈ ಮಂತ್ರಿ ಯಾವ ಸ್ಥಿತಿಯ
ಎನ್ನುವುದು ತಮಗೆ ತಿಳಿದಿರಲಾರದು. ಅವನು ಕೇವಲ ಒಬ್ಬ ಸಣ್ಣ
ಕೂನನಾಗಿದ್ದ! ಈಗ ಅವನ ಹಾವಳಿ ತಡೆಯುವುದು ಕಷ್ಟವಾಗಿದೆ.
ವಿಚಾರದಲ್ಲೂ ಈ ಮಂತ್ರಿ ರಾಜರು ಇವರ ಕಾಟ ಹೆಚ್ಚಾಗಿದೆ. ತಮ
ವಿಚಾರ ವಿಶದವಾಗಿ ತಿಳಿಸಬೇಕೆಂದು ನಾನು ತಮ್ಮಲ್ಲಿಗೆ ಬಂದೆ.'

'ಆಗಬಹುದು. ಆದರೆ ನಾನು ನಿಮಗೆ ಯಾವ ವಿಧವಾಗಿ ಸ
ಮಾಡಬಹುದೋ ನೀವೇ ಹೇಳಬೇಕು.'

ಎಲ್ಲರೂ ಕುಳಿತಿದ್ದರು. ಶ್ರೀಪತಿ ಹೇಳತೊಡಗಿದ.

'ಮೊನ್ನೆ ನಡೆದ ದರ್ಬಾರಿನಲ್ಲಿ ಆದ ಸಂಗತಿ ತಮಗೆ ತಿಳಿದಿದೆ
ಪ್ರತಿ ಪಟ್ಟಣ ಸಂಘದ ಸದಸ್ಯರೂ ದೊರೆಗೆ ನಜರನ್ನು ಒಪ್ಪಿಸಬೇ
ಆ ಮಂತ್ರಿ ಸಲಹೆಕೊಟ್ಟ ವಿಚಾರ.'

'ಅದು ಸರಿಯಲ್ಲವೆಂದು ತೋರುತ್ತೆ ನನಗೆ. ಎಲ್ಲಿ ಬಹುಮ
ಸ್ವತಂತ್ರವಿರಬೇಕೋ ಅಲ್ಲೇ ಇದನ್ನು ಹಾಕಿದಹಾಗಿದೆ.'

'ಒಡೆಯರು ರಾಜಕೀಯವನ್ನು ಬಹಳ ಚೆನ್ನಾಗಿ ಅರ್ಥಮಾಡಿ
ದ್ದಾರೆ.'

'ಅದರಲ್ಲೇನಿದೆ? ನಮ್ಮ ಶ್ರೇಣಿಗಳಲ್ಲಿ ನಾವೆಲ್ಲರೂ ಒಪ್ಪಿ ತೀ
ಮಾಡಿಕೊಂಡಂತೆ ದೇವರು ನಿಮ್ಮ ಬಾಯಲ್ಲಿ ಹೇಳಿಸಿದ. ಮೊನ್ನೆ
ಕುಸ್ತಿಯ ದಿನ ಜರುಗಿದ ವಿಚಾರ ಹೇಳ್ತೇನೆ. ಯಾವನೋ ಒಬ್ಬ ೦
ರಾಜಿಯನ್ನು ಅವಮಾನಪಡಿಸಿದನಂತೆ!'

'ರಾಜಿ ಯಾರು?'

'ಅವಳು ರಾಜನಾರಾಯಣನ ಅಂತರಂಗದ ಊಳಿಗದವಳ ತಂಗಿ.'

'ಹೇಗೆ?'

'ಅವಳು ಕುಸ್ತಿಯನ್ನು ನೋಡುವುದಕ್ಕಾಗಿ ಒಂದು ಅಟ್ಟವನ್ನು ಹಾಕಿಸಿದ್ದಳು. ಅದರ ಮೇಲೆ ತಾನೊಬ್ಬಳೇ ಕುಳಿತಿದ್ದಳು. ಈ ಯುವಕನಿಗೆ ಬೇರೆ ಎಲ್ಲೂ ಜಾಗವಿರಲಿಲ್ಲ. ಅಲ್ಲಿ ಹೋಗಿ ಅವಳ ಬಳಿ ಕುಳಿತನಂತೆ.'

'ಯಾರು ಆ ಯುವಕ?'

'ರುಸ್ತುಮು.'

'ನಮ್ಮ ರುಸ್ತುಮು.' ಎಂದ ವಿಜಯ. ಮಾಧವಪ್ರೊಡೆಯ ಅವನ ಮುಖವನ್ನು ನೋಡಿದ. 'ತಪ್ಪಾಯಿತು ಒಡೆಯರೆ' ಎಂದ ವಿಜಯ. ಶ್ರೀಪತಿ ಮೆಲ್ಲನೆ 'ಒಡೆಯರೆ ನಾವೆಲ್ಲ ನಿಮ್ಮವರು. ವಿಚಾರ ಅಪ್ಪಣೆ ಕೊಡಬೇಕು.' ಎಂದ.

'ರುಸ್ತುಮು ನಮ್ಮವನು. ನಾನು ನೂರು ಮಂದಿ ಕುಸ್ತಿಗಾರರನ್ನು ತಯಾರ್ಮಾಡುತ್ತಿದ್ದೇನೆ. ಅವರು ಇಲ್ಲಿಂದ ಹೊರಟು ಪ್ರಪಂಚವನ್ನೇ ಗೆದ್ದು ಬರಬೇಕೆಂದು ನನ್ನ ಆಶೆ.'

'ಅದಕ್ಕೇ ತಾವು ಆ ದಿನ ಕುಸ್ತಿಗೆ ಒಪ್ಪಿಕೊಂಡಿದ್ದು!'

'ಹೌದು ಶ್ರೀಪತಿ, ನಾನು ಆ ಅರಬ್ಬೀಯುವನನ್ನು ಸೋಲಿಸದಿದ್ದರೆ ನನ್ನ ಶಿಷ್ಯರಲ್ಲಿ ನನಗೆ ಗೌರವವಿಲ್ಲನೆಂದು ತೋರಿತು. ನನ್ನ ಧ್ಯೇಯ ದೊಡ್ಡದು. ಈ ಸಣ್ಣ ರಾಜ್ಯದ ವಿಚಾರಕ್ಕಿಂತ ಪ್ರಪಂಚದಲ್ಲೆಲ್ಲಾ ನಮ್ಮವರ ಕೀರ್ತಿಯನ್ನು ಹರಡುವುದು ನನಗೆ ಬೇಕಾದುದು.'

'ದೇವರು ದಯಪಾಲಿಸಲಿ.'

'ರುಸ್ತುಮುನ ವಿಚಾರ?'

'ಕೂತಿದ್ದವನನ್ನು ರಾಜಿ ಇಲ್ಲಿಂದ ಇಳಿ ಎಂದು ಗದ್ದರಿಸಿದಳಂತೆ. ಅವನಿಗೆ ಅದು ಸರಿಹೋಗಲಿಲ್ಲ. ಅವನು ಮೇಲಕ್ಕೇಳಲಿಲ್ಲ. ಪಕ್ಕದಲ್ಲಿದ್ದ ಒಬ್ಬ ಆಳಿಗೆ ಅವನನ್ನು ಆಚೆ ತಳ್ಳುವಂತೆ ಆಜ್ಞೆಮಾಡಿದಳಂತೆ. ಆಳು ಅಲ್ಲಿಗೆ ಹೋಗಿ

ರುಸ್ತುಮನನ್ನು ನೋಡಿ ಬೆದರಿ ಬಂದನಂತೆ. ರಾಜಿ ಅವನನ್ನು—ಆ ಹಂದಿಗಳನ್ನು ನೋಡಿ ಬೆದರುತ್ತೀಯಾ ಎಂದು ಎದ್ದು ಬಂದು ತನ್ನ ಎಡಗಾಲಿನಿಂದ ಅವನನ್ನು ಮಾತನಾಡಿಸಿದಳಂತೆ.'

'ಆಮೇಲೆ?'

'ರುಸ್ತುಮ ಮಾತನಾಡದೆ ಸುಮ್ಮನಿದ್ದನಂತೆ. ಅಲ್ಲಿಂದ ಏಳಲಿಲ್ಲ. ಪುನಃ ಅವನನ್ನು ಒದೆಯಲು ಬಂದು ಅಲ್ಲಿಂದ ಬಿದ್ದಳಂತೆ. ಎಲ್ಲರೂ ನಕ್ಕುಬಿಟ್ಟರು. ರುಸ್ತುಮನೂ ನಕ್ಕುಬಿಟ್ಟ. ನಿನಗೆ ಶಾಂತಿಮಾಡಿಸುತ್ತೇನೆ ಎಂದು ಹೇಳಿ ಅಲ್ಲಿಂದಾಚೆಗೆ ಅಳುತ್ತ ಮನೆಗೆ ಹೋದಳಂತೆ.'

'ಯಾವಾಗ ಇಷ್ಟೆಲ್ಲಾ ಆದದ್ದು?'

'ನೀವು ಒಳಗಿನಿಂದ ಬರುವುದಕ್ಕೆ ಮುಂಚೆ. ಆಮೇಲೆ ರುಸ್ತುಮನು ಮನೆಗೆ ಬರುತ್ತಿರುವಾಗ ರಾಜಿಯ ಕಡೆ ನಾಲ್ಕಾರು ಜನರು ಅವನ ಮೇಲೆ ಬಿದ್ದರಂತೆ. ಅವನು ಒಳ್ಳೆಯ ಮಾತಿನಲ್ಲಿ ಎಷ್ಟು ಹೇಳಿದರೂ ಅವರು ಕೇಳದೇ ಇದ್ದುದರಿಂದ, ಅವನು ದೊಣ್ಣೆ ಹಿಡಿದು ನಾಲ್ಕಾರು ಜನರ ಕೈಕಾಲು ಮುರಿಯಬೇಕಾಗಿ ಬಂತು. ಈಗ ಅವನನ್ನು ವಿಚಾರಣೆಗಾಗಿ ಇಟ್ಟಿದ್ದಾರೆ.'

'ಅಂದರೆ ಈ ದಿನ ವಿಚಾರಣೆ ಮಾಡುತ್ತಾರೋ?'

'ಹೇಗೆ ಹೇಳೋದು ? ಅದು ರಾಜರ ಇಷ್ಟ.'

'ರಾಜಿ ಹೋಗಿ ತನ್ನ ಅಕ್ಕನಲ್ಲಿ ಇದನ್ನೇ ಹೇಳಿ. ಅವಳು ಇಲ್ಲದ್ದನ್ನು ರಾಜರಿಗೆ ಹೇಳಿ, ರುಸ್ತುಮನ ತಲೆಯನ್ನು ಕೋರಿದ್ದಾಳಂತೆ!'

'ಅಲ್ಲಿಯ ವರೆಗೆ ಬಂತೆ?'

'ರಾಜನ ಇಷ್ಟ. ಅಲ್ಲದೆ ಆ ರಾಜಿ ಕುಳಿತಿದ್ದ ಅಟ್ಟ ಹಾಗೇ ಇದೆ. ಅಲ್ಲಿ ಹೋಗುವವರೆಲ್ಲ ಅದಕ್ಕೆ ಸಲಾಂ ಹಾಕಬೇಕಂತೆ!'

'ಇದು ಬಹಳ ಚೆನ್ನಾಗಿದೆ!'

'ಹೌದು ಒಡೆಯರೆ, ನಾನು ಹಾಸ್ಯಕ್ಕಾಗಿ ಹೇಳುತ್ತಿಲ್ಲ ಈಗಾಗಲೆ ಒಬ್ಬರು ಇದಕ್ಕಾಗಿ ದಸ್ತಗಿರಿ ಮಾಡಲ್ಪಟ್ಟಿದ್ದಾರೆ.'

'ಯಾರು?'

'ಬುಗ್ಗ ಸಿಂಗಪ್ಪನವರು.'

'ಏತಕ್ಕೆ?'

'ಅವರಿಗೆ ಈ ವಿಚಾರ ಗೊತ್ತಿಲ್ಲ. ಚೌಕದಲ್ಲಿ ವ್ಯಾಪಾರಕ್ಕಾಗಿ ಹೋಗಿ ಹಿಂತಿರುಗಿ ಬರುತ್ತ ಆ ದಾರಿಯಲ್ಲಿ ಬಂದರಂತೆ. ಅಲ್ಲಿ ನಿಂತಿದ್ದ ಅಧಿಕಾರಿ ಅವರನ್ನು ಅಟ್ಟಕ್ಕೆ ಸಲಾಂ ಮಾಡಿ ಅಂದನಂತೆ. ಅವರು ನಗುತ್ತ ಏನಯ್ಯಾ ಈ ನಾಟಕ! ಎಂದರಂತೆ. ಇದು ರಾಜಾಜ್ಞೆ! ಎಂದು ಅವನು ಉತ್ತರಕೊಟ್ಟ ನಂತೆ. ಒಳ್ಳೇ ರಾಜಾಜ್ಞೆ! ಇಂಥಾ ಆಜ್ಞೆಗಳು ನಮಗೆ ಮಾನ್ಯವಿಲ್ಲ. ಅಟ್ಟಕ್ಕೆ ಸಲಾಂ ಮಾಡುವುದು ಯಾವ ರಾಜ್ಯದಲ್ಲೂ ಇಲ್ಲ. ನೀವು ರಾಜರ ಹಣ ದಿಂದ ಜೀವನ ಮಾಡುವವರು, ನೀವು ಬೇಕಾದರೆ ಸಲಾಂಹಾಕಿರಿ ಎಂದನಂತೆ.'

'ಒಳ್ಳೇ ವ್ಯಾಪಾರಿ ಶ್ರೀಮಂತ. ಆಸ್ಥಾನಕ್ಕೆ ತೆರಿಗೇನೇ ವರ್ಷಕ್ಕೆ ಎರಡು ಸಾವಿರ ರೂಪಾಯಿ ಕೊಡುತ್ತಾನಲ್ಲ!'

'ಹೌದು, ಒಡೆಯರೆ ಅಂಥಾ ಗೃಹಸ್ಥನನ್ನು ಈ ದಿನ ಬೆಳಿಗ್ಗೆ ಹತ್ತು ಗಂಟೆಗೆ, ಅಂದರೆ ಇದಾದ ಒಂದು ಗಂಟೆ ಹೊತ್ತಿಗೆ ರಾಜರು ನ್ಯಾಯಾ ಸ್ಥಾನಕ್ಕೆ ಬರಬೇಕೆಂದು ಹೇಳಿಕಳಿಸಿದರು. ಆದರೆ ಆತನು ಮನೆಯಲ್ಲಿರಲಿಲ್ಲ. ಕೂಡಲೆ ರಾಜರಿಗೆ ಕೋಪ ಬಂದು, ಅವನ ಆಸ್ತಿಯನ್ನೆಲ್ಲಾ ರಾಜ್ಯಕ್ಕೆ ಸೇರಿಸಿ, ಅವರ ಮನೆಯವರನ್ನು ಆಚೆಗೆ ತಳ್ಳಿಸಿದ್ದಾರೆ. ಅವನನ್ನು ಗಡೀಪಾರು ಮಾಡಿದ್ದಾರೆ.'

'ಇದೇನು, ಸರಕಾರಕ್ಕೆ ಹುಚ್ಚುಹಿಡಿದಿದೆಯೆ ಹೇಗೆ?'

'ಇಷ್ಟೇ ಅಲ್ಲ, ಹುಡುಗರು ಮಠಕ್ಕೆ ಆ ಮಾರ್ಗವಾಗಿಯೆ ಹೋಗ-ಬೇಕಾಗಿದೆ. ಎಂಟು ವರ್ಷದಿಂದ ಹನ್ನೆರಡು ವರ್ಷದ ವರೆಗೆ ಇದ್ದಾರೆ ಎನ್ನಿ. ಅವರೆಲ್ಲ ಅಲ್ಲಿಗೆ ಹೋದ ಕೂಡಲೆ ತಮ್ಮ ಟೋಪಿಗಳನ್ನು ತೆಗೆದು ಸಲಾಂ ಹಾಕಿ ಹೋಗಬೇಕು.'

'ಮಕ್ಕಳು ಪಾಪ, ಅವರೇನು ಮಾಡಿಯಾರು!'

'ಅದೇ, ಈಗಿನ ರಾಜರು, ಮಂತ್ರಿಗಳು ಇವರಿಗೆಲ್ಲಾ ರಾಜಮರ್ಯಾದೆ ಯನ್ನು ಕಲಿಸಲು ಇದೇ ಒಳ್ಳೇ ಕೆಲಸವೆಂದು ಅಭಿಪ್ರಾಯ. ಹಣಕ್ಕಾಗಿ

ತಮ್ಮ ಸರ್ವಸ್ವವನ್ನು ರಾಜರ ಪಾದದಲ್ಲಿ ಒತ್ತೆಯಿಟ್ಟ ಈ ಹಣ ಪಿಶಾಚಿಗಳಿಗೆ ಮತ್ತೇನು ತೋರೀತು? ರಾಜರ ವಂಶ ಉಳಿಯಬೇಕು, ಅವರ ಕೀರ್ತಿ ದಿಗಂತ ವನ್ನು ವ್ಯಾಪಿಸಬೇಕು ಎಂಬುದು ಹಿಂದಿನ ಕಾಲದಲ್ಲಿತ್ತು. ಈಗಲಾದರೋ ಯಾವ ಮಂತ್ರಿ ಬರಲಿ, ಯಾವುದಾದರೂ ಒಂದು ನೆಪದಿಂದ ಜನರಲ್ಲಿ ಭೇದ-ಭಾವಗಳನ್ನು ಕಲ್ಪಿಸಿ ತಾನು ದೊಡ್ಡವನಾಗಬೇಕು, ಸಿರಿವಂತನಾಗಬೇಕು, ಎಂಬುದೇ! ಅಲ್ಲದೆ ದೇಶದಲ್ಲಿನ ಬುದ್ಧಿಯನ್ನು ಹೆಚ್ಚಿಸಬೇಕೆಂಬ ಪ್ರಯತ್ನ ವಿಲ್ಲ; ಅದನ್ನಡಗಿಸಿ ಮೇಲು ಕೀಳುಗಳನ್ನೆಲ್ಲಾ ಒಂದಾಗಿ ಮಾಡಿ-ಅಂದರೆ ಕೀಳಾಗಿ ಮಾಡಿ, ರಾಜಕಾರ್ಯಧುರೀಣರೆಂದೆನಿಸಿಕೊಳ್ಳಬೇಕು! ಒಂದು ಪಟ್ಟಣ ದಲ್ಲಿರುವ ಜನವನ್ನು ವಿಭಾಗಮಾಡಿ, ಒಂದು ಪಂಗಡಕ್ಕೆ ಸಹಾಯಮಾಡಿ, ಇನ್ನೊಂದು ಪಂಗಡವನ್ನು ತುಳಿಯುವುದೇ ಅವರ ಮುಖ್ಯ ಕರ್ತವ್ಯ! ಹೆಚ್ಚೇನು, ಅವರ ಮನೆಗಳಲ್ಲೂ ಹಾಗೇ! ಪೋಕರಿ ಘಟಿಂಗರಾದ ಮಕ್ಕಳಿಗೇ ಉತ್ತೇಜನ. ಕೇವಲ ಒಳ್ಳೆಯವರಾಗಿ ದೈವಭಕ್ತಿಯುಳ್ಳವರ ಕೈಗೆ ಆ ತಂದೆ ತಾಯಿಗಳು ಕೊಡೋದು ಚಿಪ್ಪೇ! ಇಂತಹ ದುರ್ದಶೆ ಬಂತು ಈ ರಾಜ್ಯಕ್ಕೆ! ಇದು ಬಹಳ ದಿನಗಳ ವರೆಗೆ ಉಳಿಯುವಂತೆ ಕಾಣಲಿಲ್ಲ.'

'ಬಹಳ ಶೋಚನೀಯವಾಗಿದೆ.'

'ನಮ್ಮ ಧನಪತಿಯನ್ನು ರಾಜರು ನಲವತ್ತಾರುದಿನ ಸೆರೆಯಲ್ಲಿಟ್ಟಿದ್ದರು.'

'ಏತಕ್ಕಾಗಿ?'

'ಅದೇ ಯಾರಿಗೂ ಗೊತ್ತಿಲ್ಲ. ಏತಕ್ಕಾಗಿ ಅವರನ್ನು ಬಿಟ್ಟರೋ ಯಾವುದೂ ಗೊತ್ತಿಲ್ಲ. ಹನ್ನೊಂದು ವರ್ಷದ ಹುಡುಗನೊಬ್ಬನನ್ನು ರಾಜ ದ್ರೋಹಿಯೆಂದು ಗಡೀಪಾರು ಮಾಡಿದ್ದಾರೆ.'

'ಚೆನ್ನಾಯಿತು. ಇವಕ್ಕೆಲ್ಲಾ ಏನು ಪರಿಹಾರ? ನನ್ನಿಂದ ತಮಗೆ ಏನಾಗಬೇಕು?'

'ಅದಕ್ಕೇ ನಾನು ತಮ್ಮಲ್ಲಿಗೆ ಬಂದಿದ್ದು. ನಮ್ಮ ವರ್ತಕಶ್ರೇಣಿ ಮುಂತಾದವುಗಳಲ್ಲಿ ಬಹಳ ಮಂದಿ ಬಲಶಾಲಿಗಳಿದ್ದಾರೆ. ಅವರಿಗೆ ಸರಿಯಾದ ಶಿಸ್ತು ಸಿಗುತ್ತಿಲ್ಲ. ತಾವು ಈ ಶಿಸ್ತಿಗೆ ಏರ್ಪಾಟು ಮಾಡಬೇಕು. ಪ್ರತಿ ಯೊಬ್ಬನೂ ತನ್ನ ಪ್ರಾಣರಕ್ಷಣೆ ಮಾಡಿಕೊಳ್ಳುವುದಕ್ಕೆ ತಯಾರಾಗಬೇಕು. ಅದಕ್ಕಾಗಿ ತಮ್ಮ ಅಪ್ಪಣೆಗಾಗಿ ಬಂದಿದ್ದೇನೆ.'

'ಬಹಳ ದೊಡ್ಡ ಮಾತು—ಅಪ್ಪಣೆ ಎನ್ನುವುದು. ನಾನು ತಮ್ಮಗಳ ಸೇವಕ. ನಿಮ್ಮಂಥಾ ಗೃಹಸ್ಥರಿಂದಲೆ ನಮ್ಮ ಅರಮನೆಗೆ ಆದಾಯ. ಅವರೇ ನಮಗೆಲ್ಲರಿಗೂ ಪ್ರಾಣದಾಯಕರು. ನಾನು ಹೊಗಳುತ್ತೇನೆಂದು ತಿಳಿದು ಕೊಳ್ಳಬೇಡಿ. ಈ ದಿನವೇ ಐವತ್ತು ವ್ಯಾಯಾಮಶಾಲೆಗಳನ್ನು ತೆರೆಯಿರಿ. ಅಲ್ಲಿ ಜನರಿಗೆ ತರಬೇತು ಮಾಡುವುದಕ್ಕೆ ಐವತ್ತುಮಂದಿ ಯೋಧರನ್ನು ನಾನು ಕಳಿಸಿಕೊಡುತ್ತೇನೆ '

'ರುಸ್ತುಮನ ವಿಚಾರ?'

'ನಾನು ಈಗ ಅದಕ್ಕೆ ಪ್ರವೇಶಿಸುವುದಿಲ್ಲ. ಮುಂದೇನಾಗುವುದೋ ನೋಡೋಣ.'

ಇನ್ನೂ ಅನೇಕ ವಿಚಾರಗಳನ್ನು ಮಾತಾಡಿ ಶ್ರೀಪತಿ ಅಲ್ಲಿಂದ ಹೊರಟು ಹೋದ.

ರಾಜ್ಯವು ಅನಾಯಕವಾಗುವಂತೆ ಮಾಧವ ಒಡೆಯನಿಗೆ ತೋರಿತು. 'ಎಲ್ಲವೂ ದೈವ ಇಚ್ಛೆ. ನಾವು ಮಾಡಬೇಕಾದ ಕಾರ್ಯವನ್ನು ಮಾಡತಕ್ಕದ್ದೇ' ಫಲಿತಾಂಶವು ಕಾಲವಶವಾದದ್ದು!' ಎಂದು ತನ್ನ ಮನಸ್ಸಿನಲ್ಲಿಯೇ ಯೋಚಿಸಿ ಕೊಂಡ.

೩

ದೊರೆ ರಾಜಾರಾಮ. ಆಗ ತಾನೆ ನಿದ್ದೆಯಿಂದೆದ್ದಿದ್ದ. ಆಳು ಬಂದು ಸಲಾಂ ಮಾಡಿದ.

'ಏನು? '

'ಮಂತ್ರಿಗಳು ಬಂದಿದ್ದಾರೆ.'

'ಒಳಕ್ಕೆ ಬರಹೇಳು.'

ಒಳಕ್ಕೆ ಬಂದ ಮಂತ್ರಿ ನಮಸ್ಕಾರಮಾಡಿದ – 'ಮಹಾಸ್ವಾಮಿಯವರಿಗೆ ಜಯವಾಗಲಿ!'

ರಾಜಾರಾಯ ಮಂತ್ರಿಗೆ ಆಸನದ ಕಡೆ ಕೈತೋರಿಸಿ ಕುಳಿತುಕೊಳ್ಳುವಂತೆ ಸನ್ನೆ ಮಾಡಿದ. ಮಂತ್ರಿ ಕೂತುಕೊಂಡ.

'ಏನು ಮಂತ್ರಿ, ಜಯವಾಗುವುದಕ್ಕೆ ನಾವೀಗ ಯಾವ ಯುದ್ಧಕ್ಕೆ ಹೋಗಬೇಕಾಗಿದೆ?'

'ಯುದ್ಧವೇ ತಮ್ಮಲ್ಲಿಗೆ ಬರುವ ಹಾಗಿದೆ. ಮಹಾಸ್ವಾಮಿಯವರಿಗೆ ತಿಳಿಯದೆ ಇಲ್ಲ. ಆದರೆ ನಾನು ಹೇಳಬೇಕಾದ್ದು ನನ್ನ ಕರ್ತವ್ಯ!'

'ಅಂದರೆ?'

'ಅಂದರೆ ಈಗ ಊರಿನಲ್ಲಿ ಕಳವಳ ಹೆಚ್ಚಾಗಿದೆ. ಅಟ್ಟದ ಕಾನೂನಿನಿಂದ ರಾಜ್ಯದಲ್ಲಿ ದಂಗೆಯೇಳುವ ರೀತಿ ಕಾಣುತ್ತೆ, ಮಹಾಸ್ವಾಮಿ.'

'ಅಂದರೆ ರಾಜರ ಮರ್ಯಾದೆ ಅವರು ಸಲ್ಲಿಸುತ್ತಿಲ್ಲವೆಂಬೋ ಮಾತೋ!'

'ಮರ್ಯಾದೆಯ ಮಾತಲ್ಲ. ಪ್ರಜೆಗಳಿಗೆ ಈಚೆಗೆ ಸ್ವಾತಂತ್ರ್ಯದ ವಿಚಾರ ಹೆಚ್ಚಿನದಾಗಿ ಕಾಣುತ್ತಿದೆ.'

'ನಮ್ಮ ಜನರಿದ್ದಾರಲ್ಲ? ಅವರೇನು ಮಾಡುತ್ತಿದ್ದಾರೆ?'

'ಅವರೂ ಇದ್ದಾರೆ. ತಮ್ಮ ಮತವನ್ನು ತಪ್ಪದೆ ಆಚರಿಸುತ್ತಿದ್ದಾರೆ. ತಾವು ಮೊನ್ನೆ ಅಟ್ಟದ ಕಟ್ಟಳೆಯನ್ನು ಹಾಕಿದ ಕಾಲದಲ್ಲಿ ಹೇಳಿದ ಮಾತಿನಿಂದ ಜನರಿಗೆ ಮನಸ್ಸು ಬದಲಾಯಿಸಿದಂತೆ ಕಾಣುತ್ತೆ.'

'ಏನು ಮಾತದು?'

'ಈ ಕಟ್ಟಳೆಯಿಂದ ಪ್ರಜೆಗಳ ಶಿಸ್ತು ಹೆಚ್ಚುತ್ತದೆ. ಅಲ್ಲದೆ ರಾಜಮರ್ಯಾದೆಗೆ ಕಳಂಕವನ್ನು ತರುವ ಪ್ರತಿಯೊಬ್ಬ ಪ್ರಜೆಗೂ ಮರ್ಯಾದೆಯನ್ನು ನೆನಪಿನಲ್ಲಿಟ್ಟಿರಬೇಕೆಂಬುದು ಮನಸ್ಸಿನಲ್ಲಿ ನಾಟುತ್ತದೆ—ಇದರಿಂದ ಜನರಲ್ಲಿ ಎರಡು ಪಂಗಡವಾದಂತೆ ಕಾಣುತ್ತಿದೆ.'

'ಇದಕ್ಕೇನು ಮಾಡಬೇಕೆಂದು ನಿನ್ನ ಸಲಹೆ?'

'ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದರೆ ಹೇಳುತ್ತೇನೆ. ಶಕ್ತಿಗಿಂತಲೂ ಯುಕ್ತಿಯಿಂದ ಕಾರ್ಯವನ್ನು ಬೇಗ ಚೆನ್ನಾಗಿ ಸಾಧಿಸಬಹುದು.'

'ಹೇಗೆ?'

'ಈಗ ಬಂಧನದಲ್ಲಿರುವ ರುಸ್ತುಮನನ್ನು ಬಿಡುವುದು. ಬಿಡುವಾಗ ರಾಜಾಜ್ಞೆ ಅಗತ್ಯವಿಲ್ಲ.'

'ಆಮೇಲೆ?'

'ಅವನನ್ನು ನಮ್ಮವನನ್ನಾಗಿ ಮಾಡಿಕೊಂಡು ಊರಿನಲ್ಲಿ ಈಗ ನಡೆಯುತ್ತಿರುವ ವಿಚಾರವನ್ನೆಲ್ಲಾ ನಾವು ತಿಳಿದುಕೊಂಡು ಒಬ್ಬೊಬ್ಬರನ್ನಾಗಿ ಶಿಕ್ಷಿಸಬಹುದು.'

'ಒಳ್ಳೆಯ ಉಪಾಯವೆ!'

'ಹಾಗಾದರೆ ನನಗೆ ಅಪ್ಪಣೆ ಕೊಡಿಸೋಣವಾಗಲಿ. ನಾನು ಮುಂದಿನ ಕಾರ್ಯ ಮಾಡುತ್ತೇನೆ.'

ಹಿರಣ್ಣಯ್ಯ ಮುಂದಿನ ಕಾರ್ಯವನ್ನು ಮಾಡಲು ಸೆರೆಮನೆಯ ಕಡೆಗೆ ಹೋದ. ಕಾವಲುಗಾರರು ಮಂತ್ರಿಯನ್ನು ನೋಡಿದ ಕೂಡಲೆ, ಸಲಾಂ ಮಾಡಿ ಮರ್ಯಾದೆಯಿಂದ ಒಳಕ್ಕೆ ಕರೆದುಕೊಂಡು ಹೋದರು. ಸುಭೇದಾರ ಮಾನಪ್ಪನಿಗೆ ಎಲ್ಲಾ ವಿಚಾರವನ್ನೂ ಮಂತ್ರಿಯವರು ಅಪ್ಪಣೆ ಕೊಡಿಸಿದರು. ಮಾನಪ್ಪ ಮಂತ್ರಿಗಳ ಕೈಗೇ ರುಸ್ತುಮನನ್ನಿಟ್ಟಿದ್ದ ಕೋಣೆಯ ಬೀಗದ ಕೈಯನ್ನು ಕೊಟ್ಟ.

ಮಂತ್ರಿಗಳೊಬ್ಬರೇ ರುಸ್ತುಮನ ಕೋಣೆಯೊಳಕ್ಕೆ ಹೋದರು.

ಮಲಗಿದ್ದ ರುಸ್ತುಮನು ಮಂತ್ರಿಗಳನ್ನು ನೋಡಿದ ಕೂಡಲೆ ಎದ್ದು ನಮಸ್ಕಾರಮಾಡಿದ.

'ಕೂಡಪ್ಪ, ಕೂಡು,' ಎಂದರು ಮಂತ್ರಿಗಳು. ರುಸ್ತುಮನು ಅಲ್ಲೇ ಪಕ್ಕದಲ್ಲಿ ಹೋಗಿ ನಿಂತ. ಮಂತ್ರಿಗಳೇ ಮಾತೆತ್ತಿದರು.

'ಅಲ್ಲಾ ರುಸ್ತುಮ, ನಿನ್ನನ್ನು ಇಲ್ಲಿಟ್ಟಿರುವುದು ಬಹಳ ಅನ್ಯಾಯವೆಂದು ನನಗೆ ತೋರಿದೆ. ಅದಕ್ಕೇ ನಾನು ಇಲ್ಲಿಗೆ ಬಂದಿದ್ದೇನೆ. ತಪ್ಪಿಸಲು ಸಹಾಯ ಮಾಡಿದರೆ ತಪ್ಪಿಸಿಕೊಂಡು ಹೋಗುವಿಯಾ?'

'ಸ್ವಾಮಿ, ಕ್ಷಮಿಸಬೇಕು. ನಾನೇನೂ ಕಳ್ಳನಲ್ಲ, ತಪ್ಪಿಸಿಕೊಂಡು ಹೋಗುವುದಕ್ಕೆ. ನಾನೇನೂ ಕದ್ದಿಲ್ಲ. ನನ್ನ ಆತ್ಮಸಂರಕ್ಷಣೆಗಾಗಿ ನಾನು ಹೊಡೆದಾಡಿದೆ.'

'ಅವೆಲ್ಲಾ ಕೆಲಸಕ್ಕೆ ಬರೋದಿಲ್ಲ ನಿನಗೆ ಪ್ರಾಣದ ಮೇಲೆ ಆಶೆ ಇದ್ದರೆ ತಪ್ಪಿಸಿಕೋ. ನಾನು ಇಲ್ಲೆ ಇರತೇನೆ, ತಗೋ.'

ತನ್ನ ಜೇಬಿನಿಂದ ಒಂದು ಸಣ್ಣ ಪೆಟ್ಟಿಗೆಯನ್ನು ತೆಗೆದು ಮಂತ್ರಿಯು ರುಸ್ತುಮನ ಕೈಗೆ ಕೊಟ್ಟ. ಪೆಟ್ಟಿಗೆಯನ್ನು ರುಸ್ತುಮನು ತೆರೆದು ನೋಡಿದ. ಅದರಲ್ಲಿ ಗರಗಸ ಮುಂತಾದ ಸಲಕರಣೆಗಳಿದ್ದವು.

'ಇವುಗಳಿಂದ ಐದು ನಿಮಿಷದೊಳಗಾಗಿ ನೀನು ಆಚೆ ಹೋಗಬಹುದು. ನಾನಿಲ್ಲೇ ಇದ್ದು ಸಹಾಯಮಾಡುತ್ತೇನೆ.' ಎಂದ ಮಂತ್ರಿ.

ರುಸ್ತುಮನು ಪೆಟ್ಟಿಗೆಯನ್ನು ಆ ಕಲ್ಲುಬೆಂಚಿನ ಮೇಲಿಟ್ಟ. 'ಅದು ನನ್ನ ಕೈಲಾಗತಕ್ಕದ್ದಲ್ಲ. ಯಾವಾಗ ಬೇಕೋ ಆಗ ದೊರೆಗಳೇ ವಿಚಾರಣೆ ಮಾಡಲಿ. ಬಂದಿದ್ದೆಲ್ಲಾ ಬರಲಿ. ಹೀಗೆ ಹೋಗುವುದು ಕಳ್ಳತನ ಎಂದು ನಮ್ಮ ಗುರುಗಳು ಹೇಳಿದ್ದಾರೆ. ಅವರ ಮಾತನ್ನು ನಾನು ಎಂದಿಗೂ ಮೀರ ಲಾರೆ. ಕಳ್ಳತನವನ್ನು ಮಾಡುವುದಿಲ್ಲ ಎಂದು ಮಾತು ಕೊಡುವ ವರೆಗೂ ನಮ್ಮ ಗುರುಗಳು ನನಗೆ ಈ ಶಿಸ್ತನ್ನು ಕಲಿಸಲಿಲ್ಲ. ಈ ಕೆಲಸ ನನ್ನಿಂದ ಅಸಾಧ್ಯ!'

ಮಂತ್ರಿಯ ಮುಖ ಪೆಚ್ಚಾಯಿತು. ಸಾಮಾನ್ಯ ಮನುಷ್ಯನೊಬ್ಬನು ಈ ರೀತಿ ಮಾತನಾಡುತ್ತಾನೆಂದು ಆತನು ಎಣಿಸಿಕೊಂಡಿರಲಿಲ್ಲ. ಸರಿಯಾದ ತರಬೇತಿನಿಂದ ನಮ್ಮ ದೇಶದಲ್ಲಿ ಎಂತಹ ಯುವಕರು ಸಾಧುಶಿರೋಮಣಿಗಳು ತಯಾರಾಗುತ್ತಾರೆಂದು ಆ ಮಂತ್ರಿ ಕನಸು ಕೂಡ ಕಂಡಿರಲಿಲ್ಲ.

'ಯಾರು ನಿಮ್ಮ ಗುರುಗಳು?'

ರುಸ್ತುಮನು ಮಾತನಾಡಲಿಲ್ಲ. 'ನೀನೇನೂ ಅದನ್ನೂ ಹೇಳುವುದಿಲ್ಲ ವೆಂದು ಮಾತುಕೊಟ್ಟಿಲ್ಲವಲ್ಲ' ಎಂದ ಮಂತ್ರಿ.

'ಇಲ್ಲ.'

‘ಹಾಗಾದರೆ ಹೇಳಬಹುದಲ್ಲ.’

‘ಮಾಧವ ಒಡೆಯರು.’

‘ಮಾಧವ ಒಡೆಯರಿಗೆ ಶಿಷ್ಯರಿದ್ದಾರೆಂದು ಮಾತ್ರ ತಿಳಿದಿತ್ತು. ಆದರೆ ಇಂತಹ ಪ್ರಾಮಾಣಿಕ ಶಿಷ್ಯರೆಂದು ತಿಳಿದಿರಲಿಲ್ಲ’

‘ನಾನೇನು ಮಹಾಸ್ವಾಮಿ, ಅವರಲ್ಲಿ ಅತ್ಯಲ್ಪ. ನನ್ನಂತಹ ಶಿಷ್ಯರು ಅವರಿಗೆ ನೂರಾರು ಮಂದಿ ಇದ್ದಾರೆ. ಆದರೆ ಅಂತಹ ಗುರುಗಳು ನಮಗೆ ಅವರೊಬ್ಬರೇ!’

‘ಎಷ್ಟು ಮಂದಿ ಮುಖ್ಯ ಶಿಷ್ಯರಿದ್ದಾರೆಂದು ಕೇಳಬಹುದೆ?’

‘ಮುಖ್ಯ ಶಿಷ್ಯರು ಇಬ್ಬರೇ.’

‘ಯಾರವರು?’

‘ಆ ವಿಚಾರ ತಾವು ನನ್ನನ್ನು ಕೇಳಕೂಡದು. ನಮ್ಮ ವ್ಯಾಯಾಮ ಶಾಲೆಗೆ ಸೇರಿದ್ದು ಆ ಸಮಾಚಾರ.’

‘ನೀನು ಯಾರೊಡನೆ ಮಾತನಾಡುತ್ತಿರುವೆ ಎಂಬುದನ್ನು ಜ್ಞಾಪಕಕ್ಕೆ ತಂದುಕೋ!’

‘ಸರಿ.’

‘ಹೇಳುವೆಯೋ ಇಲ್ಲವೊ!’

‘ಇಲ್ಲ, ಸ್ವಾಮಿ.’

ಮಂತ್ರಿಗಳಿಗೆ ಚೆನ್ನಾಗಿ ತಿಳಿಯಿತು, ಅವನ ಬಾಯಿಂದ ಏನು ಮಾಡಿದರೂ ಈ ವಿಚಾರ ಹೊರಡುವುದಿಲ್ಲವೆಂದು. ತಾನು ಸೋತನೆಂದು ಹೇಗೆ ಹೇಳಿಕೊಳ್ಳುವುದು ಎಂದು ಒಂದು ಕಡೆ. ಮತ್ತೊಂದು ಕಡೆ ಇದರಿಂದ ಮಾಧವ ಒಡೆಯನ ಮುಕ್ತಿಯನ್ನು ಹೇಗಾದರೂ ಸಾಧಿಸಬೇಕೆಂದು ಯೋಚನೆ. ಹೀಗೇ ಯೋಚನೆ ಮಾಡುತ್ತ ತನ್ನ ಮನೆಗೆ ಸೇರಿದನು ಆ ಮಂತ್ರಿ.

ಇತ್ತಲಾ ರುಸ್ತುಮನಿಗೆ ಮಂತ್ರಿ ತನ್ನನ್ನು ಬಿಡಿಸಲು ಏತಕ್ಕೆ ಬಂದ ಎಂಬುದು ತಿಳಿಯಲಾರದಾಯಿತು. ನಿಜವಾಗಿಯೂ ಮಂತ್ರಿಯು ಒಳ್ಳೆಯವ

ನಿರಬಹುದೆ? ಹಾಗಿದ್ದರೆ ವಿಚಾರಣೆಯ ಕಾಲದಲ್ಲೇ ಬಿಡಿಸಬಹುದಾಗಿತ್ತಲ್ಲ! ತನ್ನಿಂದ ಏನೋ ತಿಳಿದುಕೊಳ್ಳಲು ಬಂದಿರಬೇಕೆಂದುಕೊಂಡು ತಾನು ಮಾಧವ ಒಡೆಯರ ಹೆಸರನ್ನೇ ಹೇಳಿದ್ದು ತಪ್ಪೆಂದು ಮನಸ್ಸಿನಲ್ಲಿ ನೊಂದುಕೊಂಡನು.

೪

ಹಿರಣ್ಣಯ್ಯನಿಗೆ ಒಂದು ಕಡೆ ತನ್ನ ಚಿತ್ರಗಳು ಈ ರೀತಿ ಮಾಡಿರಲಾರ ಕೆಂದು ಮನಸ್ಸು ಹೇಳುತ್ತಿತ್ತು. ಅವನ ಗೌರವಕ್ಕೆ ಇದು ಸರಿಯಾದುದೆ? ಮಾಡಿರಲಿ ಮಾಡದಿರಲಿ, ಮಾತು ಬಂದ ಮೇಲೆ ಅದರಲ್ಲೇನೋ ಇರಬೇಕು. ಹೊಗೆ ಕಂಡಕಡೆ ಬೆಂಕಿ ಇದ್ದೇ ಇರಬೇಕು. ಈ ರೀತಿಯಾಗಿ ಯೋಚನೆ ಮಾಡುತ್ತ ಮನೆಯನ್ನು ಸೇರಿ, ಭೋಜನವನ್ನು ಮುಗಿಸಿದನು.

ಇನ್ನೇನು ತಾಂಬೂಲವನ್ನು ಮುಗಿಸುವ ಹೊತ್ತಿಗೆ ಮಾಯಾದೇವಿ ಅಲ್ಲಿ ಪ್ರತ್ಯಕ್ಷಳಾದಳು.

‘ಏನು ಊಟವಾಯಿತೆ?’

‘ಉ.’

‘ತಾಂಬೂಲ ಕೇಳಬಾರದಿತ್ತೆ. ನಾನೇ ಕೊಡುತ್ತಾ ಇದ್ದೆ. ಅಷ್ಟು ಎಳೀ ಕೈ ಆಗದಿದ್ದರೂ ಪಳಗಿದ ಕೈ!’ ಎನ್ನುತ್ತ ನಕ್ಕಳು.

‘ನಿನ್ನ ನಗು ನನಗೀಗ ಬೇಕಾಗಿಲ್ಲ. ನನ್ನ ಮನಸ್ಸಿನ ಶಾಂತಿಯನ್ನು ನಾಶ ಮಾಡಿದೆ.’

‘ನಿಜ ಹೇಳಿದರೆ ಯಾವಾಗಲೂ ಹಾಗೇ. ನೀವು ಮಾಡೋ ಕೆಲಸ ಹೇಳಿದರೆ ಯಾವಾಗಲೂ ನಿಮಗೆ ಹಾಗೇ. ಮನಸ್ಸು ಸರಿಯಾಗಿಲ್ಲದ ಕಾಲ ದಲ್ಲಿ, ಬಂದೀಖಾನೆಗೆ ಆ ಕೈದಿಯನ್ನು ನೋಡುವುದಕ್ಕೆ ಏತಕ್ಕೆ ಹೋಗ್ಬೇಕಾಗಿತ್ತು?’

‘ಕೈದಿ!’

‘ಹೌದು. ನಿಮಗೆ ಕಿವಿ ಕೂಡ ಮಧ್ಯಸ್ಥವಾಗಿ ಬಿಟ್ಟಿತಲ್ಲ! ಹೋಗಿ ಅವನ ಹತ್ತಿರ ಏಕಾಂತವಾಡಿ ಬಿಟ್ಟುಬಂದಿರಿ. ರಾಜರಿಗೆ ಇದು ತಿಳಿದರೆ, ನಮ್ಮ ಗತಿ ಏನು?’

'ನಿನಗೆ ಇದನ್ನು ಹೇಳಿದವರಾರು?'

'ಯಾರೇನು ಹೇಳೋದು? ನಿಮ್ಮ ಮೇಲ್ಮೈಗಾಗಿಯೆ ನಾನು ನಿಮ್ಮನ್ನು ನೋಡುತ್ತ ಇರಬೇಕಾಗಿದೆ.'

'ಅಂದರೆ ಚಿತ್ರಗುಪ್ತರ ಕೆಲಸವನ್ನು ನೀನು ಮಾಡುತ್ತಾಯಿದ್ದೀ, ಎನ್ನ ಬಾರದೆ?'

'ಅದರ ನಿಜತ್ವ ನೀವಿನ್ನು ಸ್ವಲ್ಪ ಐದು ನಿಮಿಷಗಳ ಮುಂಚೆ ಬಂದಿದ್ದರೆ ತಿಳಿಯುತ್ತಿತ್ತು.'

'ಹೇಗೆ?'

'ಯಾರ ವಿಚಾರವಾಗಿ ನೀವು ನಿಮ್ಮ ಸಕಲವನ್ನೂ ಒಪ್ಪಿಸಲು ತಯಾರಾಗಿದ್ದೀರೋ ಅವರ ಬಳಿಗೆ ಮಾಧವ ಒಡೆಯರು ಬಂದಿದ್ದರು. ಬಹಳ ಹೊತ್ತು ಮಾತನಾಡುತ್ತಿದ್ದರು. ತಾವು ಬಂದೀಖಾನೆಗೆ ಹೋದ ವಿಚಾರ ಇಲ್ಲಿ ತಿಳಿದ ಕೂಡಲೆ, ಅವರಿಗೆ ಯಾವ ತೊಂದರೆಯೂ ಇಲ್ಲದಂತಾಯಿತು. ನೀವು ಅಲ್ಲೇ ಇದ್ದು ಬಿಟ್ಟಿದ್ದರೆ ನಿಮ್ಮ ಚಿತ್ರ-ವಿಚಿತ್ರಾಬಾಯಿಯವರಿಗೆ ಇನ್ನೂ ಚೆನ್ನಾಗಿತ್ತು!'

'ಇದೇನು ನೀನಾಡುವ ಮಾತು!'

'ಅಲ್ಲ, ನಿಮಗೇನು ಬುದ್ಧಿಯೆ ಕೆಲಸ ಮಾಡುತ್ತಿದ್ದ ಹಾಗೆ ಕಾಣಲಿಲ್ಲ. ಎಂಥಾ ಮಂತ್ರಿಗಳು ನೀವು ಎಂತೇನೆ! ಒಂದು ಸಲ ಸೂಚನೆ ಕೊಟ್ಟರೆ ತಿಳಿಯುವಂತಹ ಸಮಾಚಾರ, ಬಾಯಿಬಿಟ್ಟು ಹೇಳಿದರೂ ತಿಳಿದುಕೊಳ್ಳಲಾರಿರಲ್ಲ!'

'ಏನೋ ಹುಚ್ಚು ಹುಚ್ಚಾಗಿ ಮಾತನಾಡುತ್ತಿದ್ದೀ.'

'ನಾನು ಮಾತಾಡೋದೆಲ್ಲ ಹುಚ್ಚು! ನೀವು ಇರೋ ರೀತಿ —ನಮ್ಮ ಮನೆತನಕ್ಕೇ ಗೌರವ ಹೋಗೋ ಕಾಲ ಬಂದಿದೆ. ನೀವು ಮೀನ ಮೇಷ ಎಣಿಸುತ್ತ ಕುಳಿತಿದ್ದೀರಿ. ಇದೆಂತಹ ಬಾಳು ಬಂತು!'

'ನನಗೆ ನಿನ್ನ ಮಾತು ಕೇಳುವುದಕ್ಕೆ ತಾಳ್ಮೆಯಿಲ್ಲ. ಇಲ್ಲಿಂದ ಇನ್ನು ನೀನು ಹೋಗಬಹುದು. ನಾನೇನು ಮಾಡಬೇಕೋ ಎಲ್ಲಾ ಚೆನ್ನಾಗಿ ಯೋಚಿಸಿ ಮಾಡುತ್ತೇನೆ. ಬೆಳಗ್ಗೆ ಎದ್ದು ಈ ವಿಚಾರವಾಗಿಯೆ ಅರಮನೆಗೆ ಹೋಗುತ್ತೇನೆ.'

ಅಷ್ಟೇ ಬೇಕಾಗಿದ್ದು ಆ ಮಾಯಾದೇವಿಗೆ. ರಾಜನ ಬಳಿ ಈ ಫಿರ್ಯಾದು ಹೋಗಬೇಕು. ಅಲ್ಲಿ ವಿಚಾರಣೆಯಾಗಬೇಕು. ಆಗ ತನ್ನ ಸವತಿಗೆ ಸಾಕಾದಷ್ಟು ಶಾಂತಿಯಾಗುತ್ತೆ. ತನ್ನ ಮನಸ್ಸಿಗೂ ನೆಮ್ಮದಿಯಾಗುತ್ತೆ.

ಈ ವಿಚಾರವಾವುದೂ ಚಿತ್ರಾದೇವಿಗೆ ತಿಳಿದಿರಲಿಲ್ಲ.

ಬೆಳಿಗ್ಗೆ ಎಂದಿನಂತೆ ಹಿರಣ್ಯಯ್ಯ ದಿವಾನಖಾನೆಯ 'ಒಳಕ್ಕೆ ಹೋಗುತ್ತಲೆ ಅಲ್ಲಿ ಯಾರೋ ಒಂದು ಜಲ್ಲಡಿ ಬಿಟ್ಟಿದ್ದರು. ಯೋಚನೆ ಮಾಡುತ್ತ ಹಿರಣ್ಯಯ್ಯ ಅದರ ಮೇಲೆ ಕಾಲಿಟ್ಟ. ಒಂದು ಗೊನೆಯ ಮೇಲೆ ಕಾಲಿಟ್ಟೊಡನೆ ಆ ಜಲ್ಲಡಿಯು ಹಾರಿ ಅವನ ಹಣೆಗೆ ಹೊಡೆಯಿತು. ಮಂತ್ರಿಗಳು ನೋವಿಗಾಗಿ ಕೂಗಿಕೊಂಡರು. ಕಣ್ಣನ್ನೆ ಮುಚ್ಚಿದರು. ಈ ಕೂಗನ್ನು ಕೇಳಿ ಅಲ್ಲಿದ್ದ ಒಬ್ಬ ಜವಾನ ಬಂದ.

'ಕರೀ ಇಲ್ಲಿ ಹೈದರನನ್ನ

ಜವಾನ ಹೋಗಿ ಕರೆದುಕೊಂಡು ಬಂದ. ಹೈದರನು ಬಗ್ಗಿ ಸಲಾಂ ಮಾಡಿದ.

'ಇಲ್ಲೀಕೆ ಬಂತು ಈ ಜಲ್ಲಡಿ?'

'ಸ್ವಾಮಿ, ಬೆಳಿಗ್ಗೆ ಆ ಕೋಣೆ ಕಸ ಬಳೀತಿದ್ದೆ. ಕುಮರಿ ಮಾಲೀಸ ಮಾಡುವ ಕರೀಮು ಬಂದ; ಅವನ ಕೈಲಿತ್ತು ಜಲ್ಲಡಿ. ಅವನೇ ಅದನ್ನು ಇಲ್ಲಿ ಬಿಟ್ಟು ಹೋಗಿರಬೇಕು.'

'ಕರೀ ಕರೀಂನ ಇಲ್ಲಿಗೆ.'

ಹೈದರನು ಹೋಗಿ ಕರೀಂನ ಕರೆದುಕೊಂಡು ಬಂದ. ಕರೀಂ ಒಂದು ಸಲಾಂ ಹಾಕಿದ.

'ಅಲ್ಲ, ನೀನು ಇಲ್ಲಿಗೆ ಬರಬೇಕಾದ ಕೆಲಸವೇನಿತ್ತು? ಯಾತಕ್ಕೆ ಬಂದೆ?'

'ಸ್ವಾಮಿ, ಕ್ಷಮಿಸಬೇಕು. ನಾನು ಇಲ್ಲಿಗೆ ಬರಬೇಕಾದ ಅಗತ್ಯವಿರಲಿಲ್ಲ. ಆದರೆ....'

'ಆದರೆ, ಏನು?'

'ಇಲ್ಲಿಗೆ ಬಂದಿದ್ದು, ತಾವು ಈ ದಿನ ಕುದುರೆಯ ಮೇಲೆ ಹೋಗು-ತ್ತೀರೋ ಅಥವಾ ಗಾಡಿಯಲ್ಲಿ ಹೋಗುತ್ತೀರೋ ಎಂದು ಕೇಳುವುದಕ್ಕೆ ಬಂದಿದ್ದೆ.'

'ಜಲ್ಲಡಿ ನಿನ್ನ ಕೈಲಿತ್ತೆ?'

'ಇತ್ತು ಸ್ವಾಮಿ. ನಾನು ಇಲ್ಲಿಯೆ ಮರೆತು ಹೋದೆ '

'ರಂಗರಾಯನನ್ನು ಕರೆಯಿರಿ.' ಹೈದರ್ ಹೋಗಿ ರಂಗರಾಯನನ್ನು ಕರೆದುಕೊಂಡು ಬಂದ. 'ಹಾಗೇ ಮೂರು ಬೆತ್ತಗಳನ್ನು ತರಿಸಿರಿ.' ಎಂದರು ಮಂತ್ರಿಗಳು. ಬೆತ್ತಗಳೂ ಬಂದವು.

ಕರೀಂ ಕೇಳಿಕೊಂಡ 'ಸ್ವಾಮಿ, ಕ್ಷಮಿಸಿರಿ. ಇನ್ನು ಮೇಲೆ ಇಲ್ಲಿಗೆ ಬರು ವುದಿಲ್ಲ. ತಪ್ಪಾಯಿತು!'

'ಸಾಕು, ಸುಮ್ಮನಿರು!'

ಕರೀಂ ಸುಮ್ಮನಾದ. ತನ್ನ ದೇವರನ್ನು ನೆನಪಿಕೊಂಡ. ಬೆಳಿಗ್ಗೆ ಎದ್ದು ಯಾರ ಮುಖವನ್ನು ನೋಡಿದೆನೋ ಎಂದು ಪೇಚಾಡಿಕೊಂಡ.

ಮಂತ್ರಿಗಳು ಹೇಳಿದರು. 'ರಂಗರಾಯನನ್ನು ಕಂಬಕ್ಕೆ ಕಟ್ಟಿ ಹನ್ನೆರಡು ಏಟು ಕೊಡಿ '

ರಂಗರಾಯನ ಮುಖದಲ್ಲಿ ರಕ್ತ ಮಾಯವಾಯಿತು. 'ಸ್ವಾಮಿ, ನನ್ನ ತಪ್ಪೇನು?'

'ನನ್ನ ತಪ್ಪೇನು! ಕೇಳುವುದಕ್ಕೆ ನಾಚಿಕೆಯಿಲ್ಲವೆ? ಇದು ನಿನ್ನ ತಪ್ಪಾ-ಗದೆ ಮತ್ತಾರದು? ಈ ನನ್ನ ಕೋಣೆಗೆ ಕರೀಂ ಏತಕ್ಕೆ ಬಂದ? ಅವನು ನಿನಗೆ ಕಾಣದೆ ನನ್ನ ಮನೆಯೊಳಕ್ಕೆ ಬಂದ ರೀತಿ ಹೇಗೆ? ಎಲ್ಲೋ ಇದ್ದ ಜಲ್ಲಡಿ ಯನ್ನು ಅವನು ತಂದು ನನ್ನ ಆಫೀಸಿನಲ್ಲಿ ಬಿಟ್ಟು ಹೋದರೆ, ನೀನೇತಕ್ಕೆ ಅದನ್ನು ನೋಡಿಕೊಳ್ಳಲಿಲ್ಲ? ತಂದವನು ಹಿಂದಕ್ಕೆ ತೆಗೆದುಕೊಂಡು ಹೋಗಬೇಕು. ಇದನ್ನು ನೀನವನಿಗೆ ಅಭ್ಯಾಸ ಮಾಡಿಸಿದಂತೆ ತೋರಲಿಲ್ಲ. ನೀನು ನನ್ನ ಮನೆಯನ್ನು ಸರಿಯಾಗಿ ನೋಡಿಕೊಂಡರೆ ಇಂತಹ ವಿಚಾರ ಗಳಿಗೆ ಅವಕಾಶವಿರಲಿಲ್ಲ ಆದ್ದರಿಂದ ತಪ್ಪೆಲ್ಲಾ ನಿನ್ನದೇ ನಿನಗೆ ನಾನು ಸಂಬಳ

ಕೊಡುವುದೇತಕ್ಕೆ.... ನನ್ನ ಕೋಣೆಯೊಳಗೇ ನನ್ನ ಹಣಿಗೆ ಏಟು ತಿನ್ನುವುದ ಕ್ಕೇನು? ಬಿಗಿಯಿರಿ ಇವನನ್ನು! ಕಟ್ಟಿ ಚೆನ್ನಾಗಿ ಹೊಡೆಯಿರಿ.'

ಹೀಗೆಂದು ಹೇಳಿ ಪಿಟಿಗುಟ್ಟುತ್ತಾ ಮಂತ್ರಿ ಹಿರಣ್ಣಯ್ಯನವರು ತಮಗೆ ಬೇಕಾದುದನ್ನು ತೆಗೆದುಕೊಂಡು ಗಾಡಿಯಲ್ಲಿ ಕುಳಿತು ಅರಮನೆಯ ಕಡೆಗೆ ತೆರಳಿದರು. ಜವಾನರೆಲ್ಲ ತಮ್ಮ ಯಜಮಾನನಿಗೆ ಬುದ್ಧಿ ಸರಿಯಾಗಿದ್ದ ಹಾಗಿಲ್ಲವೆಂದು ಮಾತನಾಡಿಕೊಂಡರು ಈ ವಿಚಾರ ತಿಳಿದ ಕೂಡಲೆ ಮಾಯಾ ದೇವಿಗೆ ನಗು ಹಿಡಿಯಲು ಸಾಧ್ಯವಾಗಲಿಲ್ಲ.

೫

ರಾಜನೇ ಖುದ್ದು ಬಂದ ವ್ಯವಹಾರವನ್ನೆಲ್ಲಾ ತಿಳಿದು ಜನರಿಗೆ ನ್ಯಾಯ ವನ್ನು ಮಾಡುತ್ತಿದ್ದ. ತನಗೆ ತಿಳಿಯದ ವಿಚಾರವನ್ನು ತಿಳಿಸುವುದಕ್ಕಾಗಿ ನ್ಯಾಯಾಸ್ಥಾನದಲ್ಲಿ ಹಿಂದೂ ಮತ್ತು ಮುಹಮ್ಮದೀಯ ಪಂಡಿತರನೇಕರನ್ನು ಗೊತ್ತುಮಾಡಿದ್ದ. ಪ್ರತಿಯೊಬ್ಬರೂ ಅಲ್ಲಿ ನ್ಯಾಯವನ್ನು ಹೇಳುವ ಕಾಲದಲ್ಲಿ ಇರಬೇಕೆಂದು ಕಟ್ಟುಮಾಡಿದ್ದ. ಆ ದಿನ ನ್ಯಾಯಾಸ್ಥಾನವು ತುಂಬಿತ್ತು. ರಾಜನು ನ್ಯಾಯವನ್ನು ಮಾಡಲು ಬಂದು ತನ್ನ ಪೀಠದ ಮೇಲೆ ಕುಳಿತಿದ್ದ.

ಕಾರಕೂನರು ಕೆಳಗಡೆ ಕುಳಿತಿದ್ದರು. ಅಧಿಕಾರಿಗಳು ಅವರ ಎದುರಿ ನಲ್ಲಿ ತಮ್ಮ ಆಸನಗಳಲ್ಲಿ ಕುಳಿತಿದ್ದರು. ನ್ಯಾಯಾಧಿಪತಿಯ ಬಲಗಡೆ ಸಾಕ್ಷಿ ಗಳು, ಎದುರಿನಲ್ಲಿ ತಪ್ಪಿತಸ್ಥರು ಕೂಡುವುದಕ್ಕೆ ಸ್ಥಳವನ್ನೇರ್ಪಡಿಸಿದ್ದರು.

'ಬರಲಿ' ಎಂದರು ರಾಜರು.

ಒಬ್ಬ ಒಕ್ಕಲಿಗನನ್ನು ಕರೆದುಕೊಂಡು ಬಂದು ಎದುರಿಗೆ ನಿಲ್ಲಿಸಿದರು.

'ಇವನಾರು?' ಎಂದರು ರಾಜರು.

'ಯಾರಯ್ಯ ನೀನು?' ಎಂದ ಕಾರಕೂನ 'ಸತ್ಯ ಹೇಳಬೇಕು ನೋಡು.'

'ಆಗಲಿ ಬುದ್ಧೀ.' ಎಂದ ಬಂದಿ.

'ನಿನ್ನ ಹೆಸರೇನು?' ಎಂದ ಕಾರಕೂನ.

'ಪೋರಪ್ಪ ಬುದ್ದೀ.'

'ಸ್ಥಳ?'

'ಮಳವಳ್ಳೀ.'

'ವಯಸ್ಸು?'

'ಏನೋ ಬುದ್ದೀ!'

'ಎಷ್ಟು ವರ್ಷ ಆಗಿರಬಹುದೈಯ್ಯಾ, ನೀನು ಹುಟ್ಟಿ?'

'ಅಂದಂಗೋ ಬುದ್ದೀ, ಎಷ್ಟಾಯಿತೋ!'

'ನಿನಗೆ ಎಣಿಸೋದಕ್ಕೆ ಬರುವುದಿಲ್ಲವೇ?'

'ಇಲ್ಲ ಸ್ವಾಮಿ. ಇಪ್ಪತ್ತೇ ನಾನು ಕಲಿತಿರೋದು.'

'ಆಗಲಿ, ನೀನು ಹುಟ್ಟಿದ ಮೇಲೆ ಎರಡಿಪ್ಪತ್ತು ವರ್ಷ ಆಗಿರಬಹುದೆ?'

'ಇರಬಹುದು ಬುದ್ದೀ.'

ಬಲಗಡೆ ಒಬ್ಬ ಯುವಕನನ್ನು ತಂದು 'ಇಲ್ಲಿ ನಿಲ್ಲು' ಎಂದು ಅಧಿಕಾರಿಗಳು ನಿಲ್ಲಿಸಿದರು.

'ನೀನು ನಿಜ ಹೇಳಬೇಕು?'

'ಏಳ್ತೀನಿ ಬುದ್ದೀ.'

'ನಿನ್ನ ಹೆಸರೇನು?'

'ಕಾಮ ಬುದ್ದೀ.'

'ನಿನ್ನ ಹೆಸರೈಯ್ಯಾ?'

'ಹೌದು ಬುದ್ದೀ ಕಾಮ.'

'ಕಾಮಣ್ಣ, ಏನಯ್ಯಾ?'

'ಕಾಮ ಅಂತಾರೆ ಬುದ್ದೀ.'

'ನೀನು ಮಂಗಳವಾರ ಬೆಳಗ್ಗೆ ಕುದುರೀನ ನೀರು ಕುಡಿಸೋದಕ್ಕೆ ತೆಗೆದುಕೊಂಡು ಹೋಗುತ್ತ ಇದ್ದೆ ಅಲ್ಲವೇನಯ್ಯಾ?'

'ಔದು ಬುದ್ದೀ, ಕುದುರೀನ'

'ಆಮೇಲೆ?'

'ಅದು, ಏನೋ ನೋಡ್ತಾಂಗೈತಿ. ಬೆದರಿಬಿಡ್ತು! ಓಡ್ತಾ ಐತೆ. ನನಗ ಇಡೀಕಾಗೊಲ್ವದು.'

'ಅಂದರೆ ನಿನಗೆ ಅದನ್ನು ಹಿಡಿಯುವುದಕ್ಕಾಗಲಿಲ್ಲ—ಅಲ್ಲವೇ?'

'ಔದು ಬುದ್ದೀ. ಅಗ್ಗ ಕಿತ್ತಿಪ್ಹೋಯಿತು. ಕುದುರಿ ಓಡ್ತಾ ಐತೆ. ನಾನು ಕೂಗಿಕೊಳ್ತಾ ಅದರಿಂದ್ಹೀನೆ ಹೋದೆ'

'ಆಮೇಲೆ?'

'ಅವ ಬರ್‍ತಾಯಿದ್ದ. ಇಡಿಕೋ ಇಡ್ಕೋ ಎಂದು ಕೂಕ್ಕೊಂಡೆ. ಇವ ಒಂದಿಟ್ಕೆ ತಗ್ಗೊಂಡು ಕುದೀರೀಗ ಆಕ್ದ.'

'ಹೊಡೆದದ್ದು ನೀ ನೋಡಿದೆಯೋ?'

'ನೋಡ್ದೆ, ಆಕ್ದ.'

'ಆದರಿಂದ ಏನಾಯಿತು?'

'ಇಟ್ಕೆ ಕುದುರೆ ಕಣ್ಣಿಗೆ ಬಿತ್ತು. ಕಣ್ಹೊಯ್ತು ಬುದ್ದೀ. ನನಗಿರೋ-ದೊಂದೇ ಕುದುರಿ. ಕಣ್ಣಿಲ್ದಂಗೆ ಬದುಕು ಅದೆಂಗ್ಮಾಡ್ತಾದೆ ಬುದ್ದೀ.'

'ಏನಂತಿ?' ಎಂದು ಎದುರಿಗಿದ್ದವನನ್ನು ಕೇಳಿದ ಕಾರಕೂನ.

'ಹೌದು ಬುದ್ದೀ ನಾನು ಹಾಕ್ದೆ ಆದರೆ ನನ್ನಾಣೆ, ಅದರ ಕಣ್ಹೋಗಲಿ ಅಂತ ಹಾಕ್ಲಿಲ್ಲ!'

'ಏನಮಾತಾಡ್ತಿ! ಇಟಿಕೆಯಿಂದ ಏಟು ಬಿದ್ದರೆ ಕಣ್ಣು ಹೋಗೋದಿಲ್ಲವೆ?'

'ಹೋಗದೆ ಉಂಟೆ!' ಎಂದ ಕಾರಕೂನ.

'ನಿನಗೇನಾದರೂ ಕುದುರೆ ಇದೆಯೊ?' ಎಂದು ರಾಜರು ಕೇಳಿದರು.

'ಇದೆ ಮಹಾಸ್ವಾಮಿ'

'ಹಾಗಾದರೆ ವ್ಯವಹಾರ ಸುಲಭವಾಯಿತು. ಇದೇ ತೀರ್ಪು: ನೀನು ಅವನ ಕುದುರೆಯ ಕಣ್ಣನ್ನು ಹಾಳು ಮಾಡಿರುವೆ. ಆದಕ್ಕಾಗಿ ಅವನು ನಿನ್ನ

ಮನೆಗೆ ಬಂದು ನಿನ್ನ ಕುದುರೆಯ ಒಂದು ಕಣ್ಣನ್ನು ತೆಗೆದು ಹಾಕಲಿ. ಮುಯ್ಯಿಗೆ ಮುಯ್ಯಿ ತೀರಿದ ಹಾಗಾಗಲಿಲ್ಲವೆ?'

ಎಲ್ಲರೂ ಚಪ್ಪಾಳೆ ಹೊಡೆದರು. ಎದುರಿಗಿದ್ದವ 'ಸ್ವಾಮಿ, ಆ ಮೂಕ ಜಂತು ಮಾಡಿದ್ದೇನು? ಹೊಡೆದದ್ದು ನನ್ನ ಕೈ. ನನ್ನ ಕೈಗೇನಾದರೂ ಮಾಡಬಹುದು ಬೇಕಾದರೆ!' ಎಂದ.

'ಇಲ್ಲಿ ನ್ಯಾಯಸ್ಥರು ಇದ್ದಾರೆ, ಪಂಡಿತರಿದ್ದಾರೆ, ತಾರ್ಕಿಕರಿದ್ದಾರೆ, ಅವರೆಲ್ಲರೂ ಹೇಳಲಿ.'

'ಯಾರೂ ಮಾತನಾಡಲಿಲ್ಲ. ಯಾವಾಗಲೂ ಕೈದಿಯ ಕಡೆ. ತಪ್ಪಿತಸ್ಥನ ಕಡೆ ಮಾತನಾಡಿದರೆ ಅವನೂ ತಪ್ಪಿತಸ್ಥನೇ ಎಂಬ ಭಾವನೆ ಆ ನ್ಯಾಯಾಸ್ಥಾನದಲ್ಲಿತ್ತು. ಆ ದಿನ ಹೊಸಬನೊಬ್ಬ ಆಸ್ಥಾನಕ್ಕೆ ಬಂದಿದ್ದ. ಅವನ ಹೆಸರು ಸುಲೇಮಾನ್. ಅವನು ಪರ್ಷಿಯಾ ದೇಶದಿಂದ ವ್ಯಾಪಾರಕ್ಕಾಗಿ ಬಂದಿದ್ದ. ನ್ಯಾಯಾಸ್ಥಾನ ವಿಚಾರವನ್ನು ಕೇಳಿ ಅವನು ಅಲ್ಲಿಗೆ ಬಂದಿದ್ದ. ಅವನು ಎದ್ದು ನಿಂತ.

'ಮಹಾಸ್ವಾಮಿ!' ಎಂದ.

ಎಲ್ಲರೂ ಅವನ ಕಡೆ ನೋಡಿದರು. ರಾಜನೂ ದಿಟ್ಟಿಸಿ ನೋಡಿದ.

'ಪ್ರಪಂಚದಲ್ಲಿ ಹೀಗಿದೆ. ಯಜಮಾನನು ತನ್ನ ಸೇವಕನ ತಪ್ಪಿಗೆ ಗುರಿ. ಅಂದರೆ ಸೇವಕನು ಮಾಡಿದ ತಪ್ಪಿಗೆ ಯಜಮಾನನು ಗುರಿಯಾಗಬಹುದು. ಆದರೆ ಈ ನ್ಯಾಯಾಸ್ಥಾನದಲ್ಲಿ ಇದು ಪಲ್ಲಟವಾಗಿದೆ. ಯಜಮಾನನ ತಪ್ಪು ಸೇವಕನ ಮೇಲೆ ಹೊರಿಸಲ್ಪಟ್ಟಿದೆ. ಮಹಾಸ್ವಾಮಿಗಳು ಇಲ್ಲಿ ನ್ಯಾಯ ಮಾಡುತ್ತಿರುವುದು ಇಬ್ಬರು ಮನುಷ್ಯರ ವಿಚಾರ. ಎರಡು ಕುದುರೆಗಳಿಗೆ ಮಹಾಸ್ವಾಮಿಯವರು ನ್ಯಾಯವನ್ನು ಮಾಡುತ್ತಿಲ್ಲ ಮಹಾಸ್ವಾಮಿಯವರ ಬಳಿ ಏಟು ತಿಂದ ಕುದುರೆ ಬಂದು ನ್ಯಾಯವನ್ನು ಕೇಳಿಲ್ಲ; ಅದರ ಯಜಮಾನನಾದ ಕೇವಲ ಸ್ವಾರ್ಥಪರನಾದ ಒಬ್ಬ ಮಾನವ ಬಂದಿದ್ದಾನೆ. ಅವನು ತಮ್ಮಲ್ಲಿಗೆ ಬಂದಿದ್ದು ಹಣದಾಶೆಗಾಗಿ. ಅವನ ಕುದುರೆಯ ಕಣ್ಣು ಹೋದುದಕ್ಕೆ ತನಗೇನಾದರೂ ಹಣ ಬಂದೀತೆ? ಎಂಬೋ ವಿಚಾರ ಅವನಿಗೆ ಬೇಕಾದದ್ದು. ಆದರೆ ಮಹಾಸ್ವಾಮಿಯವರು ನಿರಪರಾಧಿಯಾದ ಮತ್ತೊಬ್ಬನ ಕುದುರೆಗೆ ಶಿಕ್ಷೆ ವಿಧಿಸಿದ್ದಾರೆ. ಇದು ನ್ಯಾಯಸಮ್ಮತವೂ ಅಲ್ಲ, ಶಾಸ್ತ್ರಸಮ್ಮತವೂ ಅಲ್ಲ!'

ರಾಜರು ಇವನ ವಿಚಾರವನ್ನು ಚೆನ್ನಾಗಿ ತಿಳಿದುಕೊಂಡರು. ಇದರಿಂದ ಫಲವೇನೂ ಆಗಲಿಲ್ಲ, ಆ ಕುದುರೆಗೆ. ಮಾರನೆಯ ದಿನವೆ ಈ ವ್ಯಾಪಾರಿಗೆ ಯಾವ ಸರಕನ್ನೂ ಮಾರಬಾರದೆಂದು ಅರಮನೆಯಿಂದ ಆಜ್ಞೆ ಬಂತು ಅವನಿಗೆ ಶಿಕ್ಷೆ ಮಾಡಬೇಕೆಂದು ರಾಜನಿಗೆ ಇಷ್ಟವಿತ್ತು. ಆದರೆ ಪರ್ಷಿಯಾ ದೇಶದ ದೊರೆಗೆ ಜವಾಬನ್ನು ಕೊಡಬೇಕಾಗಿ ಬಂದಾಗ ತೊಂದರೆಯಾದೀತೆಂಬ ಭಯದಿಂದ ರಾಜನು ಸುಮ್ಮನಾದ.

ಸಾಮಂತರು ವರ್ತಕರು ಎಲ್ಲರೂ ಸುಲೇಮಾನನ ಧೈರ್ಯವನ್ನು ಕೊಂಡಾಡಿದರು. ಆದರೆ ಅವನಿಗೆ ಸರಕನ್ನು ಮಾರಲು ಯಾರಿಗೂ ಧೈರ್ಯವಿಲ್ಲದೆ ಹೋಯಿತು ಒಳಗೊಳಗೇ ನೊಂದುಕೊಂಡರಾಗಲಿ, ಕಾರ್ಯರಂಗಕ್ಕೆ ತಮ್ಮ ಮತವನ್ನು ಇಳಿಸಲು ಅವರ ಕೈಲಾಗಲಿಲ್ಲ

ಯಾವಾಗಲೂ ಈ ರಾಜನ ಹತ್ತಿರ ಒಂದು ಪದ್ಧತಿಯಿತ್ತು. —ನ್ಯಾಯಾಸ್ಥಾನದಿಂದ ಹೋಗುವುದಕ್ಕೆ ಮುಂಚಿತವಾಗಿ ತಾನು ವಿಚಾರ ಮಾಡುವ ಸಂಗತಿ ಇನ್ನೇನಾದರೂ ಇದೆಯೆ ಎಂದು ಕೇಳುವ ವಾಡಿಕೆ. ಆ ದಿನವೂ ಹಾಗೇ ಕೇಳಿದ.

ಕೂಡಲೇ ಮಂತ್ರಿ ಹಿರಣ್ಯಯ್ಯ ಬಂದು ಬಲಗಡೆ ನಿಂತ. 'ಮಹಾಸ್ವಾಮಿ, ನನ್ನದೊಂದು ವಿಚಾರ ಇದೆ.' ಎಂದ.

ಎಲ್ಲರೂ ಚಮಕಿತರಾದರು.

'ಹೇಳಿ' ಎಂದ ರಾಜ.

'ಅದು ಕೇವಲ ಸಾಮಾನ್ಯ ಮನುಷ್ಯನ ಮೇಲಲ್ಲ, ರಾಜ ಮನೆತನದವನ ಮೇಲಿದೆ. ವಿಚಾರಣೆ ಮಾಡುತ್ತೇವೆಂದು ಅಭಯವನ್ನು ಕೊಟ್ಟರೆ ಹೇಳುತ್ತೇನೆ.'

'ನಾವು ಈ ಸ್ಥಳದಲ್ಲಿರುವಾಗ ನಮಗೆ ಬಂಧುಗಳು ಯಾರೂ ಇಲ್ಲ ನ್ಯಾಯವೇ ಬಂಧು!'

ಸುತ್ತಲೂ ಇದ್ದ ಪಂಡಿತರು ಸಾಮಂತರು ತಲೆಗಳನ್ನಲ್ಲಾಡಿಸಿ 'ಬಹು ದೊಡ್ಡ ಮಾತು!' ಎಂದರು. ಹಿರಣ್ಯಯ್ಯ ಅಲ್ಲಿಗೆ ಬಿಡಲಿಲ್ಲ.

'ಮಹಾಸ್ವಾಮಿಯವರು ಮಾತು ಕೊಡಬೇಕು. ಇದು ದೊಡ್ಡ ವಿಚಾರ!'

'ಹಾಗೇ ಆಗಲಿ. ಅವನು ಯಾರೇ ಆಗಲಿ. ನನ್ನ ಮಗನಾಗಿದ್ದರೂ ಸರಿಯೆ. ಇಲ್ಲಿಯೆ ನ್ಯಾಯವನ್ನು ಮಾಡುತ್ತೇನೆ ಹೇಳಿ.'

ಎಲ್ಲರೂ ಸ್ತಬ್ಧರಾಗಿದ್ದರು. ಹಿರಣ್ಯಯ್ಯ ನಿದಾನವಾಗಿ ಹೇಳತೊಡಗಿದ.

'ಮಹಾಸ್ವಾಮಿ, ನನಗೆ ಇಬ್ಬರು ಹೆಂಡತಿಯರು. ಎರಡನೆಯವಳು ಸುಂದರಿಯೆಂದು ನಾನು ಮದುವೆಯಾದೆ. ಆಕೆಯ ವಿಶ್ವಾಸವು ಬೇರೊಬ್ಬನಲ್ಲಿ ಇದೆ ಎಂದೂ ಆ ಪುರುಷನು ನಾನಿಲ್ಲದ ಸಮಯದಲ್ಲಿ ನನ್ನ ಮನೆಯಲ್ಲಿರುತ್ತಾನೆಂತಲೂ ನನ್ನ ಕಿವಿಗೆ ಬಿದ್ದಿದೆ. ಇದನ್ನು ತಾವು ವಿಚಾರಿಸಬೇಕು.'

'ಇದನ್ನು ನಿಮಗೆ ತಿಳಿಸಿದವರಾರು?'

'ನನ್ನ ದೊಡ್ಡ ಹೆಂಡತಿ.'

'ಸರಿ, ಆ ದೊಡ್ಡ ಹೆಂಡತಿಯನ್ನು ಕರೆಸಿ ವಿಚಾರಿಸುವೆನು.'

'ಮಹಾಸ್ವಾಮಿ!'

'ಏನದು?'

'ಇದು ಚಿಕ್ಕವಳಿಗೆ ತಿಳಿಯದಂತೆ ಮಾಡಬೇಕು. ನಾನು ಚೀಟಿಯನ್ನು ಬರೆಯುತ್ತೇನೆ. ಆಕೆಯೆ ಇಲ್ಲಿಗೆ ಬರುವಳು.'

'ಹಾಗೇ ಆಗಲಿ.'

ಸ್ವಲ್ಪ ಹೊತ್ತಿನಲ್ಲಿಯೇ ಮಾಯಾದೇವಿ ಅಲ್ಲಿಗೆ ಬಂದಳು. 'ನಾನು ನ್ಯಾಯಾಸ್ಥಾನಕ್ಕೆ ಬರುತ್ತೇನೆಂದಂದುಕೊಳ್ಳಲಿಲ್ಲ,' ಅಂದಳು ಗಂಡನ ಮುಖವನ್ನು ನೋಡುತ್ತ.

'ಯತ್ನವಿಲ್ಲ. ತಿಳಿದದ್ದನ್ನು ಹೇಳಬೇಕಾಗಿದೆ,' ಎಂದ ಹಿರಣ್ಯಯ್ಯ.

'ನಿನ್ನ ಸವತಿಗೊಡನೆ ಮಾತನಾಡಲು ಬರುವ ಮಾನವನ ಹೆಸರು ತಿಳಿದಿದೆಯೆ' ಎಂದು ರಾಜನು ಮಾಯಾದೇವಿಯನ್ನು ಕೇಳಿದನು.

'ತಿಳಿದಿದೆ.'

'ಹೆಸರೇನು?'

'ಇಲ್ಲಿ ಎಲ್ಲರ ಎದುರಿನಲ್ಲಿಯೂ ಹೇಳಬಹುದೆ? ಆತನು ರಾಜವಂಶದವ.'

'ಆದರೇನು? ಇಲ್ಲಿ ಹೇಳಲೇಬೇಕು.'

'ಸರಿ. ಮಾಧವ ಒಡೆಯರು.'

'ಏನು, ಯಾರು?' ಎಂದನು ರಾಜ

'ಮಾಧವ ಒಡೆಯರು.'

'ಏತಕ್ಕಾಗಿ ಬರುತ್ತಾರೆ ಎಂಬುದು ನಿನಗೆ ನಿಜವಾಗಿ ಗೊತ್ತೆ?'

'ಗೊತ್ತು. ಅವರು ನನ್ನ ಸವತಿ ಚಿತ್ರಾವತಿಯನ್ನು ಮೋಹಿಸುತ್ತಿರು ವಂತೆ ನನಗೆ ತೋರುತ್ತಿದೆ.'

'ಇದು ಸತ್ಯವೆ?'

'ನಾನು ರಾಜಾಸ್ಥಾನದಲ್ಲಿ ಸುಳ್ಳು ಹೇಳಲು ಬರಲಿಲ್ಲ.'

'ಸರಿ. ಇವರ ನಿಜಸ್ಥಿತಿಯನ್ನು ನಾನು ಈಗಲೇ ತಿಳಿಯುತ್ತೇನೆ. ನೀವು ಹೊರಡಬಹುದು. ಯಾರಲ್ಲಿ?'

'ಅಪ್ಪಣೆ ಸ್ವಾಮಿ!'

ನಾಲ್ಕುಮಂದಿ ಸೇವಕರು ಬಂದರು.

'ಈಗಲೇ ಹೋಗಿ ಮಾಧವ ಒಡೆಯರನ್ನು ಇಲ್ಲಿಗೆ ಕರೆದುಕೊಂಡು ಬನ್ನಿ.'

ಸೇವಕರು ಅಲ್ಲಿಂದ ಹೋದರು. ರಾಜನು ತನ್ನಲ್ಲಿ ತಾನೆ 'ಇದೇನೊ ವಿಚಿತ್ರವಾಗಿದೆ. ಮಾಧವ ಒಡೆಯನು ಇಂಥವನೆಂದು ನಾನಂದುಕೊಂಡಿರ ಲಿಲ್ಲ. ಏನೇ ಆಗಲಿ, ಇವರ ಕೊನೆಯನ್ನು ಈ ದಿನವೇ ನೋಡಿಬಿಡಬೇಕು.' ಅಂದುಕೊಂಡು, ಎದುರಿಗಿದ್ದ ಒಬ್ಬ ಪಂಡಿತನನ್ನು ಕರೆದು 'ಸಮಯಕ್ಕೆ ತಕ್ಕ ನಾಯಕನ ವಿಚಾರವಾಗಿ ಒಂದು ಸಣ್ಣ ಉಪನ್ಯಾಸವನ್ನು ಕೊಡಬೇಕು' ಎಂದನು.

ಆ ಪಂಡಿತನ ಹೆಸರು ನೇಮಿಚಂದ್ರ. ಸಾಹಿತ್ಯವನ್ನು ಚೆನ್ನಾಗಿ

ಅಭ್ಯಾಸ ಮಾಡಿದ್ದ. 'ಕಾಲದ ಅವಧಿ ದಯಪಾಲಿಸಬೇಕು.' ಎಂದ ರಾಜನನ್ನು ನೋಡಿ. 'ಸುಮಾರು ಹತ್ತು ನಿಮಿಷಗಳಾಗಬಹುದು. ಮಾಧವ ಒಡೆಯರು ಬರುವ ವರೆಗೂ' ಎಂದನು ರಾಜ. ಪಂಡಿತನು ಮೊದಲು ಮಾಡಿದ

'ಮಹಾಸ್ವಾಮಿ, ನಾಯಕನ ಸಾಮಾನ್ಯ ಲಕ್ಷಣಗಳನ್ನು ಹೇಳುತ್ತೇನೆ. ಅವನು ನೋಡ-ವುದಕ್ಕೆ ಚೆನ್ನಾಗಿರಬೇಕು. ಸುಂದರಪುರುಷನಾಗಿರಬೇಕು. ಧೈರ್ಯವಂತನಾಗಿರಬೇಕು. ಶೌರ್ಯವನ್ನು ತೋರಿಸಬೇಕು. ಸಮರ್ಥನೂ ತ್ಯಾಗಿಯೂ ಧಾರ್ಮಿಕನೂ ಆಗಿರಬೇಕು. ಚೆನ್ನಾಗಿ ಸ್ಪಷ್ಟವಾಗಿ ಮಾತನಾಡಬೇಕು. ಪ್ರಿಯವಾಗಿಯೂ ಮಾತನಾಡತಕ್ಕ ಶಕ್ತಿ ಅವನಿಗಿರಬೇಕು. ಒಳ್ಳೆ ವಂಶದಲ್ಲಿ ಹುಟ್ಟಿದವನಾಗಿರಬೇಕು; ಅಲ್ಲದೆ ವಿದ್ಯಾಬುದ್ಧಿಗಳುಳ್ಳವನಾಗಿರಬೇಕು.'

'ಅಲ್ಲವಯ್ಯಾ, ಇಷ್ಟೆಲ್ಲಾ ಇರುವವನು ಈ ಭೂಮಿಯಲ್ಲಿರುವನೆ?'

'ಇಲ್ಲದೆ ಏನು ಮಹಾಪ್ರಭೂ, ದಶರಥಾದಿಗಳು ಇಲ್ಲಿರಲಿಲ್ಲವೆ? ರಾಮಾವತಾರವಾಗಲಿಲ್ಲವೆ? ಹರಿಶ್ಚಂದ್ರಾದಿಗಳು ನಮ್ಮ ಭೂಮಿಯಲ್ಲಿ ರಾಜ್ಯವಾಳಲಿಲ್ಲವೆ?'

'ಅಲ್ಲ. ನಾನು ಹೇಳುವುದು ಸಾಮಾನ್ಯವಾಗಿ ಈ ಲಕ್ಷಣಗಳು ಮಾನವನಲ್ಲಿರುತ್ತವೆಯೆ?'

'ಹಾಗಿದ್ದ ಪಕ್ಷದಲ್ಲಿ ಪ್ರತಿಯೊಬ್ಬನೂ ನಾಯಕನೇ ಆಗುತ್ತಿದ್ದ. ಈ ಭೂಮಿಯು ದಿವಿಗೆ ಸಮಾನವಾಗುತ್ತಿತ್ತು.'

'ಅಂದರೆ ಇಲ್ಲಿ ಇಲ್ಲವೆಂದರ್ಥ.'

'ಆದುದರಿಂದಲೇ ಓದುವವರ ಮನಸ್ಸು ಆ ನಾಯಕನ ಕಡೆಗೆ ತಿರುಗುವುದು.'

'ಸರಿ.'

'ಇಂಥ ನಾಯಕರಲ್ಲಿ ಅನೇಕ ವಿಧಗಳುಂಟೆಂದು ನಮ್ಮ ಶಾಸ್ತ್ರದಲ್ಲಿ ಬರೆದಿದ್ದಾರೆ. ಅವರಲ್ಲಿ ಶೃಂಗಾರ ನಾಯಕರು ಕೆಲವರಿದ್ದಾರೆ ಆ ಶೃಂಗಾರ ನಾಯಕರಲ್ಲಿ ಈಗ ಒಬ್ಬನ ಗುಣವನ್ನು ಹೇಳುತ್ತಿದ್ದೇನೆ.

ಸೃಷ್ಟ್ವೈಕಾಸನ ಸಂಸ್ಥಿತೇ ಪ್ರಿಯತಮೋ ಪಶ್ಚಾದ್ಯುಪೇದ್ಯಾದರಾತ್।
ಏಕಸ್ಯಾನಯನೇ ನಿಮೀಲ್ಯ ವಿಹಿತಕ್ರೀಡಾನುಬಂಧಚ್ಛಲಃ॥
ಈಷತ್‌ಕಂಪಿತ ಕಂದರಃ ಸಪುಲಕಃ ಪ್ರೇಮೋಲ್ಲಸನ್ಮಾನಸೋ।
ಅಂತರ್ಹಾಸಲಸತ್ಕಪೋಲ ಫಲಕಾಂ ಧೂರ್ತೋಽಪರಾಂಶ್ಚುಂಬತೀ॥

ಅಂದರೆ ಅನೇಕ ನಾಯಕಿಯರು ಆ ನಾಯಕನಿಗಿರುತ್ತಾರೆ. ಹೊರಗೆ ಎಲ್ಲರಲ್ಲೂ ಸಮಾನವಾದ ಅನುರಾಗವನ್ನೆ ತೋರಿಸುತ್ತ ಒಳಗೆ—ಅಂತರಂಗವಾಗಿ ಒಬ್ಬಳನ್ನು ಹೆಚ್ಚಾಗಿ ಪ್ರೀತಿಸುತ್ತ, ಮತ್ತೊಬ್ಬಳಿಗೆ ತೊಂದರೆಯನ್ನುಂಟು ಮಾಡುವನು.'

'ಬಹಳ ಚೆನ್ನಾಗಿದೆ ಈ ಭಾವ. ಸ್ವಲ್ಪ ವಿವರಿಸಬೇಕು.'

'ಇಬ್ಬರು ನಾಯಕಿಯರಿದ್ದಾರೆ ಎನ್ನೋಣ. ಇಬ್ಬರನ್ನೂ ಕೂಡಿಸಿ ತಾನು ಹಿಂದೆ ನಿಂತು ನಾಯಕ ಒಬ್ಬಳಿಗೆ ಹೇಳುತ್ತಾನೆ—ಪ್ರೇಯಸಿ, ನಿನಗೆ ಒಂದು ವಿಚಿತ್ರ ತೋರಿಸುತ್ತೇನೆ. ಕಣ್ಣು ಮುಚ್ಚಿಕೋ ಎಂದು ಅವಳ ಕಣ್ಣನ್ನು ಮುಚ್ಚಿ ಪಕ್ಕದಲ್ಲಿದ್ದ ಮತ್ತೊಬ್ಬಳನ್ನು ಚುಂಬಿಸುತ್ತಾನೆ.'

'ಬಹಳ ಚೆನ್ನಾಗಿದೆ.' ಎಂದು ರಾಜನು ನಕ್ಕ.

'ಇದನ್ನು ನನ್ನ ಕಾಣಿಕೆಯಾಗಿ ನೀವು ಧರಿಸಬೇಕು.' ಎನ್ನುತ್ತ ಮಂತ್ರಿ ಹಿರಣ್ಯಯ್ಯ ಪಂಡಿತನಿಗೆ ತನ್ನ ಕೈಯಲ್ಲಿದ್ದ ಉಂಗುರವನ್ನು ಕೊಟ್ಟನು.

'ಸರಸ್ವತಿ ಉಪಾಸಕರಿಗೆ ಲಕ್ಷ್ಮಿ ದೊರೆಯುವುದು ತಮ್ಮಂಥ ರಸಿಕರಿಂದಲೆ' ಎನ್ನುತ್ತ ಪಂಡಿತ ಅದನ್ನು ತೆಗೆದುಕೊಂಡ.

ಅಷ್ಟು ಹೊತ್ತಿಗೆ ಹೊರಗಡೆ ಶಬ್ದವಾಯಿತು. ಮಾಧವ ಒಡೆಯನು ರಾಜರ ಸೇವಕರೊಡನೆ ನ್ಯಾಯಾಸ್ಥಾನಕ್ಕೆ ಬಂದನು.

'ಮಾಧವ ಒಡೆಯನ ಮೇಲೆ ತಪ್ಪು ಆರೋಪಣೆಯಾಗುತ್ತಿದೆ. ಅದಕ್ಕಾಗಿ ಅವನನ್ನು ಎದುರಿಗೆ ನಿಲ್ಲಿಸಿರಿ. ಎದುರಿಗೆ ಬರಬೇಕು.' ಎಂದರು ರಾಜರು ಗಟ್ಟಿಯಾಗಿ.

ಮಾಧವ ಒಡೆಯನು ತಪ್ಪಿತಸ್ಥನ ಸ್ಥಳಕ್ಕೆ ಬಂದು ನಿಂತನು. ವಿಚಾರಣೆ ಜರುಗಿತು.

'ನಿಜವನ್ನು ಹೇಳಬೇಕು.'

'ಹೇಳುತ್ತೇನೆ.'

'ನಿನ್ನ ಮೇಲೆ ಈ ದಿನ ತಪ್ಪು ಹೊರಿಸುತ್ತಿದ್ದಾರೆ.'

'ನನಗೆ ವಿಚಾರವೆ ಗೊತ್ತಿಲ್ಲ.'

'ಮಂತ್ರಿಯೆಲ್ಲಿ?'

'ಹಾಜರಿದ್ದೇನೆ ಮಹಾಸ್ವಾಮಿ.'

'ಮಾಧವ ಒಡೆಯನ ತಪ್ಪನ್ನು ಹೇಳೋಣವಾಗಲಿ.'

'ಮಹಾಸ್ವಾಮಿ. ಒಡೆಯರು ನನ್ನ ಮನೆಗೆ ನಾನಿಲ್ಲದ ಸಮಯದಲ್ಲಿ ಬಂದು ನನ್ನ ಕಿರಿಯ ಹೆಂಡತಿಯೊಡನೆ ಮಾತನಾಡಿ, ನನ್ನ ಗೌರವವನ್ನು ತೆಗೆದಿದ್ದಾರೆ.'

ರಾಜನು ಮಾಧವ ಒಡೆಯನನ್ನು ಕೇಳಿದ 'ನೀನು ಮಂತ್ರಿಯಿಲ್ಲದ ಹೊತ್ತಿನಲ್ಲಿ ಅವರ ಮನೆಗೆ ಹೋದದ್ದು ಉಂಟೆ?'

'ನಿಜ.'

'ಅವರಿಲ್ಲದ ಕಾಲದಲ್ಲಿ ಅವರ ಕಿರಿಯ ಹೆಂಡತಿಯ ಸಂಗಡ ಮಾತ ನಾಡುವುದುಂಟೆ?'

'ಉಂಟು.'

'ಏನು–ಶರಸಸಲ್ಲಾಪಗಳೋ?'

'ಇಲ್ಲ—ಅದಲ್ಲ.'

'ಮತ್ತೇನು?'

ಮಾಧವ ಒಡೆಯನು ಮಾತನಾಡಲಿಲ್ಲ.

'ಹೇಳಿದರೆ ಸರಿ. ಇಲ್ಲವಾದರೆ....ಹೆಂಗಸರು ಇರುವ ಜಾಗಕ್ಕೆ ನೀನು ಹೋಗಿ ಪ್ರತಿದಿನವೂ ಮಾತನಾಡುವುದಕ್ಕೆ ಅಂತಹ ಮಹತ್ತರವಾದ ಕಾರಣ ವೇನು?'

ಮಾತಿಲ್ಲ.

'ಸರಿ. ನೀನು ಮಂತ್ರಿಯ ಆತ್ಮಗೌರವಕ್ಕೆ ಕುಂದನ್ನು ತಂದಿರುವೆ. ಅದಕ್ಕಾಗಿ ನಿನಗೆ ಈಗಲೆ ಮರಣದಂಡನೆಯನ್ನು ವಿಧಿಸಿರುತ್ತೇನೆ.'

ಸಭೆಯಲ್ಲಿದ್ದವರೆಲ್ಲರೂ ಎದ್ದು ನಿಂತರು. ಪಂಡಿತನೊಬ್ಬನು 'ಮಹಾಸ್ವಾಮಿಗಳು ಇಂತಹ ಕಠೋರ ಕಟ್ಟಲೆಯನ್ನು ವಿಧಿಸಲಾಗದು. ಇನ್ನೂ ಯುವಕ. ಯಾವ ವಿಚಾರಕ್ಕೂ ಸಿಧಾನವಾಗಿ ಯೋಚನೆ ಮಾಡುವುದು ಒಳ್ಳೆಯದು. ಆತನ ತಾತನ ಹೆಸರಿಗಾದರೂ ಕುಂದು ಬರದಂತೆ ತಾವು ಕಟ್ಟಲೆಯನ್ನು ಮಾಡತಕ್ಕದ್ದು. ಕೊಲ್ಲುವುದು ಮಹಾಪಾಪ!' ಎಂದನು.

'ಈ ರಾಜದ್ರೋಹಿಯನ್ನೂ ಮಾಧವ ಒಡೆಯನ ಹಿಂದೆ ಸಾಗಿಸಿರಿ.' ಎಂದ ರಾಜ.

ಯಾರೂ ಕದಲಲಿಲ್ಲ. ಸೇವಕರು ಎಲ್ಲರೂ ಕಲ್ಲಿನ ಗೊಂಬೆಗಳಂತಿದ್ದರು. ಪುನಃ ರಾಜನೇ ಆಜ್ಞೆ ಮಾಡಿದ.

'ಏನು ನೋಡುತ್ತಿದ್ದೀರಿ. ಅವನನ್ನು ಹಿಡಿದುಕಟ್ಟಿರಿ.'

ನಾಲ್ಕಾರು ಮಂದಿ ನುಗ್ಗಿದರು. ಅಷ್ಟರಲ್ಲಿ ಮಾಧವ ಒಡೆಯ ತನ್ನ ಸೊಂಟದಲ್ಲಿದ್ದ ಪಿಸ್ತೂಲನ್ನು ತೆಗೆದು ಅವರಿಗೆ ತೋರಿಸಿದ. 'ಒಂದು ಹೆಜ್ಜೆ ಮುಂದಕ್ಕೆ ಬಂದರೆ ನಿಮ್ಮ ಗತಿ ಮುಗಿಯಿತು' ಎಂದ. ಅಷ್ಟರಲ್ಲಿ ಆಚೆ ಕಡೆಯಿಂದ ಕತ್ತಿಯನ್ನು ಹಿರಿದು ಇಪ್ಪತ್ತು ಮಂದಿ ಯುವಕರು ಒಳಕ್ಕೆ ಬಂದರು. ಮಾಧವ ಒಡೆಯನು ತಪ್ಪಿಸಿಕೊಂಡು ಆಚೆಗೆ ಹೋದ. ರಾಜನು ಕೂತಿದ್ದ ಕಡೆಯ ಕಣ್ಣು ಮುಚ್ಚಿದ. ಎಲ್ಲರಿಗೂ ಭಯವಾಯಿತು. ಸೇವಕರು ರಾಜನ ಬಳಿಗೆ ಹೋಗಿ ಉಪಚಾರ ಮಾಡಿ ಆತನನ್ನು ಎಬ್ಬಿಸುವ ಹೊತ್ತಿಗೆ ಎಲ್ಲರೂ ಪರಾರಿಯಾಗಿದ್ದರು.

'ಯಾರಾದರೂ ಸರಿಯೆ. ಮಾಧವ ಒಡೆಯನನ್ನು ನನ್ನಲ್ಲಿಗೆ ತಂದರೆ ಅವರಿಗೆ ಎರಡು ಸಾವಿರ ರೂಪಾಯಿ ಬಹುಮಾನ ಕೊಡುತ್ತೇನೆ.' ಎಂದು ಗಟ್ಟಿಯಾಗಿ ಹೇಳಿ ರಾಜಾರಾಯ ತನ್ನ ಕೋಣೆಯೊಳಕ್ಕೆ ಹೋದ.

ನ್ಯಾಯಾಸ್ಥಾನವು ಬರಿದಾಯಿತು.

೬

ಹಿರಣ್ಯಯ್ಯನ ಮೇಲೆ ಈ ಕೆಲಸವು ಬಿತ್ತು. ತಾನೇ ಅವನ ಮೇಲೆ ತಪ್ಪನ್ನು ಹೊರಿಸಿ, ಹುಡುಕುವುದಕ್ಕೆ ಸರಿಯಾದ ಆಳುಗಳನ್ನು ಕಳಿಸದಿದ್ದಲ್ಲಿ ದೊರೆಗೆ ತನ್ನ ಮೇಲೆ ಅನುಮಾನವೆಲ್ಲಿ ಬರುತ್ತೋ ಎನ್ನುವ ಹೆದರಿಕೆ ಅವನಿಗೆ ಬಹಳವಾಯಿತು. ತನ್ನ ಮನೆಯಲ್ಲಿರುವ ಆಳುಗಳಿಗೆಲ್ಲಾ ಹೇಳಿದ—'ನೀವು ಯಾರಾದರೂ ಸರಿಯೆ; ಮಾಧವ ಒಡೆಯರನ್ನು ಹಿಡಿಯುವ ರೀತಿಯನ್ನು ತೋರಿಸಿದರೆ ನಿಮಗೆ ಆ ಎರಡು ಸಾವಿರದ ಜೊತೆಗೆ ನಾನೂ ಒಂದು ಸಾವಿರ ಕೊಡುತ್ತೇನೆ.'

ಮನೆಯ ಕೆಲಸವನ್ನು ಬಿಟ್ಟು ಹೋಗುವುದಕ್ಕೆ ಇದು ಒಳ್ಳೆಯ ಸಮಯ ವೆಂದು ಆಳುಗಳೆಲ್ಲರೂ ಮಾಧವ ಒಡೆಯನನ್ನು ಹುಡುಕಲು ಹೊರಟರು. ಹಿರಣ್ಯಯ್ಯನೊಬ್ಬನೇ ಮನೆಯಲ್ಲಿ ನಿಂತ.

ರಾಜನಿಗೂ ಈ ವಿಚಾರವು ತೊಂದರೆಕೊಡದೆ ಇರಲಿಲ್ಲ. ತನ್ನ ಆಪ್ತ ಸೇವಕನಾದ ದುರಧರನನ್ನು ಕರೆದು ಎಲ್ಲವನ್ನೂ ಹೇಳಿದ. ಹೇಗಾದರೂ ಮಾಡಿ ಈ ಕಾರ್ಯವನ್ನು ಕೈಗೂಡಿಸಬೇಕೆಂದ. ಆದರೆ ದುರಧರನು 'ಮಹಾ ಸ್ವಾಮಿ, ಇದು ನನ್ನಿಂದ ಸಾಧ್ಯವಿಲ್ಲ. ನಿಮ್ಮ ಕೆಲಸ ಬಿಡು ಎಂದರೆ ಬಿಡತೇನೆ. ಇದಕ್ಕೆ ನಿವು ನಿಮ್ಮ ಸೈನ್ಯಾಧಿಪತಿಯನ್ನೇ ಕಳಿಸಿಕೊಡಬೇಕು.' ಎಂದು ಹೇಳಿದ.

ಅದೂ ಒಳ್ಳೆಯ ಉಪಾಯವೆಂದು ಆ ದೊರೆಗೆ ತೋರಿತು. ಸೈನ್ಯಾಧಿ ಪತಿಯು ನಿಜವಾಗಿಯೂ ಶೂರ. ಆದರೆ ಯುಕ್ತಿವಂತನಲ್ಲ. ತನಗೆ ಈ ರಾಜ್ಯವು ಸಿಗುವಂತೆ ಮಾಡಿದ ಆತನ ತಂದೆಯ ಇಷ್ಟದಂತೆ ಈ ವೀರಸಿಂಹ ನನ್ನು ಸೈನ್ಯಾಧಿಪತಿಯನ್ನಾಗಿ ನೇಮಿಸಿದ್ದ ರಾಜಾರಾಯ. ದುರಧರನಿಗೇ ಹೇಳಿದ, ಸೈನ್ಯಾಧಿಪತಿಯನ್ನು ತನ್ನಲ್ಲಿಗೆ ಕಳಿಸುವಂತೆ. ಸೈನ್ಯಾಧಿಪತಿಯಾದ ವೀರಸಿಂಹನು ರಾಜನ ಬಳಿಗೆ ಬಂದು ನಮಸ್ಕಾರ ಮಾಡಿದ.

'ಈ ದಿನ ನ್ಯಾಯಸಭೆಯಲ್ಲಿ ನಡೆದ ವಿಚಾರ ಗೊತ್ತಾಯಿತೆ?'

'ಗೊತ್ತಾಯಿತು ಮಹಾಸ್ವಾಮಿ.'

'ಆ ಮಾಧವ ಒಡೆಯನು ನನಗೆ ಮಾಡಿದ ಅಪಮಾನವನ್ನು ನೀನು ಹೇಗೆ ಸಹಿಸುವೆ?'

'ಮಹಾಸ್ವಾಮಿ, ಅವನಿನ್ನೂ ಹುಡುಗ.'

'ಏನು, ನೀನೂ ಅವನ ಕಡೆಯವನೆ?'

'ಹಾಗಲ್ಲಾ ಮಹಾಸ್ವಾಮಿ, ಅವನ ತಾತಂದಿರು ಈ ರಾಜ್ಯವನ್ನಾಳಿದವರು. ಅವನಿಗೆ ಮರಣದಂಡನೆಯನ್ನು ತಾವು ವಿಧಿಸಬಾರದಾಗಿತ್ತು.'

'ನೀನು ನನ್ನ ಉಪ್ಪುತಿಂದು ನನಗೆ ದ್ರೋಹಮಾಡಬೇಕೆಂದಿರುವೆಯಾ?'

'ಇಲ್ಲ ಮಹಾಸ್ವಾಮಿ, ನಾನು ನನ್ನ ಕೈಲಾದುದನ್ನು ಮಾಡುತ್ತೇನೆ. ಆದರೆ ಇಷ್ಟನ್ನು ಮಹಾಸ್ವಾಮಿಯವರಿಗೆ ತಿಳಿಸುತ್ತೇನೆ. ಅವನ ಕಡೆಯವರು ಧೀರರು ಅನೇಕರಿದ್ದಾರೆ.'

'ಸರಿ, ನಿನ್ನ ಪುರಾಣ ನನಗೆ ಬೇಕಾಗಿಲ್ಲ. ನಾಳೆಯೊಳಗಾಗಿ ಅವನನ್ನು ತಂದು ನನಗೊಪ್ಪಿಸಬೇಕು. ಇಲ್ಲವೆ ನಿನಗೂ ಮರಣದಂಡನೆಯೆ ಸರಿ.'

'ಹಾಗೇ ಸರಿ.'

ವೀರಸಿಂಹನು ಅರಮನೆಯಿಂದೀಚೆಗೆ ಬರುತ್ತಲೆ ಒಬ್ಬ ಬೈರಾಗಿ ಅವನ ಎದುರಿಗೆ ಬಂದ.

'ಜೈ ಸೀತಾರಾಂ. ಏನಾದರೂ ಕೊಡಿ ಪ್ರಭೂ.'

ತನ್ನ ಜೇಬಿನಿಂದ ವೀರಸಿಂಹ ಒಂದು ರೂಪಾಯನ್ನು ತೆಗೆದುಕೊಟ್ಟ. ಅದನ್ನು ಕೈಗೆ ತೆಗೆದುಕೊಂಡು ನೋಡಿ 'ಸ್ವಾಮಿ, ವಾಪಸ್ಸು ತೆಗೆದುಕೊಳ್ಳಿ, ಇದು ನ್ಯಾಯವಾಗಿ ಬಂದಿದ್ದಲ್ಲ' ಎಂದ.

ವೀರಸಿಂಹನಿಗೆ ರೇಗಿತು. 'ಏನು, ತಲೆಯಿಲ್ಲ ಮಾತನಾಡುತ್ತಿದ್ದೀ!' ಎಂದ.

'ತಲೆಯಿಂದಲೆ ಮಾತನಾಡುವುದು, ಅದಿರಲಿ, ತಾವು ಜಯಸಿಂಹರ ಮಕ್ಕಳಲ್ಲವೆ?'

'ಹೌದು, ಬೈರಾಗಿಗೇಕೆ ಅದೆಲ್ಲಾ?'

'ತಮ್ಮ ಮನೆಯಲ್ಲಿ ಬೈರಾಗಿ ಚಿತ್ರವೊಂದಿದೆ. ತಾವು ಅದನ್ನು ಚೆನ್ನಾಗಿ ನೋಡಿದ್ದೀರಾ?'

'ನೋಡಿದ್ದೇನೆ.'

'ನೋಡಿದ್ದರೆ ಈ ಮಾತು ತಾವು ಆಡುತ್ತಿದ್ದಿಲ್ಲ ಈಗಲಾದರೂ ಆ ಚಿತ್ರವನ್ನು ಜ್ಞಾಪಿಸಿಕೊಳ್ಳಿ. ನನ್ನನ್ನು ನೋಡಿ.'

'ಹೌದು. ವಿಚಿತ್ರವಾಗಿದೆ.'

'ಏನು ವಿಚಿತ್ರ?'

'ನನ್ನ ತಂದೆ ಸಾಯುವ ಕಾಲಕ್ಕೆ ನಾನು ಮಾತು ಕೊಟ್ಟಿದ್ದೆ.'

'ಆ ಚಿತ್ರದಲ್ಲಿರುವ ಬೈರಾಗಿಯಂಥವರು ಬಂದರೆ ಅವರು ಹೇಳಿದ್ದನ್ನು ಕೇಳಬೇಕಂತ?'

'ಹೌದು. ನನ್ನಿಂದೇನಾಗಬೇಕೋ ಹೇಳೋಣಾಗಲಿ.'

'ಅಯ್ಯಾ, ನೀನು ಧೀರ. ಆದರೆ ನನ್ನ ಮಾತನ್ನು ನೀನು ಕೇಳಬೇಕಾದರೆ, ನಿನ್ನ ರಾಜನಿಗೆ ದ್ರೋಹಮಾಡಬೇಕಾಗುತ್ತೆ.'

'ಮಾಡಿದರೂ ಪರವಾಯಿಲ್ಲ, ಗುರುದ್ರೋಹವನ್ನು ಮಾಡಲಾರೆ.'

'ಸರಿ, ನನ್ನೊಡನೆ ಬಾ.'

ವೀರಸಿಂಹನು ಬೈರಾಗಿಯೊಡನೆ ಹೋದ. ಇಬ್ಬರೂ ಬಹಳ ದೂರದ ವರೆಗೆ ಮಾತನಾಡದೆ ಹೋದರು. ಮೂರು ಮೈಲಿಗಳ ಆಚೆ ಒಂದು ದೊಡ್ಡ ಆಲದಮರವಿತ್ತು. ಅದರ ಹಿಂಭಾಗದಲ್ಲಿ ಒಂದು ಸಣ್ಣ ಗುಡಿಸಲು.

'ಒಳಕ್ಕೆ ಬರಬೇಕು,' ಎನ್ನುತ್ತ ಬೈರಾಗಿ ಒಳಗೆ ಹೋದ. ಅವನ ಹಿಂದೆ ವೀರಸಿಂಹನೂ ಹೋದ. ಸ್ವಲ್ಪ ಹೊತ್ತಿನಲ್ಲಿಯೆ ಯಾರೋ ಗುಡಿಸಲ ಪಕ್ಕಕ್ಕೆ ಬಂದ ಹಾಗಾಯಿತು. ಬೈರಾಗಿಯು ಗಟ್ಟಿಯಾಗಿ 'ರಾಮೂ, ಅವನನ್ನು ಬಿಡಬೇಡ.' ಎಂದ. ಇದ್ದಕ್ಕಿದ್ದ ಹಾಗೇ ಚೀತ್ಕಾರ ಧ್ವನಿಯು ಕೇಳಿಸಿತು. ವೀರಸಿಂಹ ಮೊದಲು ಈಚೆಗೆ ಬಂದ. ಅವನ ಹಿಂದೆ ಬೈರಾಗಿ. ಇಬ್ಬರೂ ಗುಡಿಸಲಿನ ಹಿಂದೆ ಹೋದರು. ಅಲ್ಲಿ ದುರಧರ ನಡುಗುತ್ತ ಬಿದ್ದಿದ್ದ. ಪಕ್ಕದಲ್ಲಿಯೆ ಒಂದು ಕರೀ ಚಿರತೆ ಸಿರ್ ಎನ್ನುತ್ತಿತ್ತು. ವೀರಸಿಂಹ ತನ್ನ ಕತ್ತಿಯನ್ನು ಸೆಳೆದ.

'ಬೇಡ, ಸಿಂಹ. ಅದು ನನ್ನ ನಾಯಿ' ಎನ್ನುತ್ತ 'ರಾಮು, ಹೋಗು' ಎಂದ ಬೈರಾಗಿ. ಚಿರತೆಯು ಹೋಯಿತು. ದುರಧರನನ್ನು ಒಳಕ್ಕೆ ಕರೆದುಕೊಂಡುಬಂದರು. ಅವನಿಗೆ ಮಾತನಾಡುವುದಕ್ಕೆ ಕೂಡ ಕಷ್ಟವಾಗಿತ್ತು. ಬೈರಾಗಿ ತನ್ನ ಬಳಿಯಿದ್ದ ಒಂದು ಮಾತ್ರೆಯನ್ನು ತೆಗೆದುಕೊಟ್ಟ. ಸ್ವಲ್ಪ ನೀರನ್ನು ಕುಡಿಸಿದ. ಒಂದೆರಡು ನಿಮಿಷದಲ್ಲಿಯೇ ಸರಿಹೋಯಿತು.

'ನೀನು ಯಾರು?' ಎಂದ ಬೈರಾಗಿ ದುರಧರನ ಕಡೆಗೆ ತಿರುಗಿ.

'ನಾನು ರಾಜಾರಾಯನ ಆಪ್ತಸೇವಕ.'

'ಅಂದರೆ ಆತನಿಗೆ ಬೇಕಾದಾಗ ವಿಷವನ್ನು ತಂದು ಕೊಡುವವನು!'

'ಇಲ್ಲ, ಅವನಲ್ಲ!'

'ಸುಳ್ಳು ಹೇಳಬೇಡ. ನಾನೀಗ ನಿನಗೆ ವಿಷ ಕೊಟ್ಟಿರುತ್ತೇನೆ. ನಿಜ ಹೇಳಿದರೆ ಸರಿ. ಇಲ್ಲವಾದರೆ ನಾನು ಕೊಟ್ಟಿರುವ ವಿಷದಿಂದಲೇ ಸಾಯುತ್ತಿ!'

'ಇಲ್ಲ ಇಲ್ಲ, ನನ್ನನ್ನು ಬದುಕಿಸಿ!'

'ನಿಜವನ್ನು ಹೇಳು.'

'ಹೌದು, ನಾನೇ.'

'ಮಹಾದೇವರಾಜ ಒಡೆಯರಿಗೆ ವಿಷವನ್ನು ಹಾಕಿದವರು ಯಾರು?'

'ಇಲ್ಲ, ಇಲ್ಲ. ಹಾಕಿದವನು ನಾನಲ್ಲ.'

'ತಂದುಕೊಟ್ಟವ?'

'ನಾನೇ.'

'ಹಾಕಿದವರು?'

'ಹೇಳಲಾರೆ.'

'ಬದುಕಲಾರೆ! ಸಾಯಿ! ಸಾಯಿ!'

'ಇಲ್ಲ, ಹೇಳ್ತೀನೆ, ರಾಜಾರಾಯ!'

'ಇದನ್ನು ನೀನು ರಾಜಾಸ್ಥಾನದಲ್ಲಿ ಹೇಳಲು ಸಿದ್ಧನಾಗಿರುವೆಯಾ?

'ಇಲ್ಲ. ನಾನು ಹೇಳಿದರೆ ನನ್ನ ಪ್ರಾಣ....'

'ಹೋಗೋದಿಲ್ಲ ನಾನು ಅದನ್ನು ನೋಡಿಕೊಳ್ಳುತ್ತೇನೆ.'

'ರಾಜಾರಾಯ ಏತಕ್ಕೆ ಈ ಕೆಲಸವನ್ನು ಮಾಡಿದ?'

'ವಯಸ್ಸಾದ ಮೇಲೆ ಮೊಮ್ಮಗನಾದ ಮಾಧವ ಒಡೆಯನಿಗೆ ರಾಜ್ಯ ಬಂದೀತೆಂದು ತಾನು ಈ ಕೆಲಸ ಮಾಡಿದ.'

'ಅದು ಹೇಗೆ?'

'ಮಹಾದೇವರಾಜ ಒಡೆಯರಿಗೆ ಹೃದಯಬೇನೆ ಇತ್ತು. ಅದಕ್ಕೆ ಅವರು ಒಂದು ವಿಲ್ ಬರೆದಿಟ್ಟಿದ್ದರು. ಅದರಲ್ಲಿ, ಮಾಧವ ಒಡೆಯರಿಗೆ ಪ್ರಾಪ್ತ ವಯಸ್ಸಾಗುವುದಕ್ಕಿಂತ ಮುಂಚಿತವಾಗಿ ತಾವು ಕಾಲವಾದರೆ ರಾಜ್ಯವು ರಾಜಾ ರಾಯನ ಆಡಳಿತದಲ್ಲಿ ಇರತಕ್ಕದ್ದೆಂದಿತ್ತು.'

'ರಾಜಾರಾಯನು ಅವರಿಗೇನಾಗಬೇಕು?'

'ಅವರ ಅಕ್ಕನ ಅಳಿಯ.'

'ಇಗೋ ತೆಗೆದುಕೋ.' ಕೈಗೆ ಮತ್ತೊಂದು ಮಾತ್ರೆಯನ್ನು ಕೊಟ್ಟು, ಅದನ್ನು ನುಂಗಿದ ತರುವಾಯ ಕೇಳಿದನು ಬೈರಾಗಿ, 'ನೀನು ಇಲ್ಲಿಗೆ ಏತಕ್ಕೆ ಬಂದೆ?'

'ವೀರಸಿಂಹರಲ್ಲಿ ರಾಜರಿಗೆ ಅಪನಂಬಿಕೆ ಹುಟ್ಟಿತು. ಅದಕ್ಕಾಗಿ ನನ್ನನ್ನು ವೀರಸಿಂಹರ ವಿಚಾರವನ್ನು ಗೌಪ್ಯವಾಗಿ ತಿಳಿಯುವುದಕ್ಕೆ ಅವರ ಹಿಂದೆ ಕಳಿಸಿದರು.'

'ಸರಿಯೆ. ನಿನಗೆ ನೀನು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತಮಾಡಿ ಕೊಳ್ಳಬೇಕೆಂದಿದೆಯೆ?'

'ಇದೆ ಸ್ವಾಮಿ. ಆದರೆ ಅದು ಸಾಧ್ಯವೆ?'

'ಸಾಧ್ಯ. ಅದಕ್ಕೆ ನೀನು ನನ್ನಂತೆ ಬೈರಾಗಿಯಾಗಬೇಕು.'

'ಸಿದ್ಧವಾಗಿದ್ದೇನೆ ಗುರುವೆ.'

'ಆದರೆ ಈಗಲ್ಲ ಸದ್ಯದಲ್ಲಿ ನೀನು ವೀರಸಿಂಹನನ್ನು ಕಾದುಕೊಂಡು ಇಲ್ಲಿಯೆ ಇರಬೇಕು ಯಾರೇ ಬಂದು ಕೂಗಿದರೂ ಈ ಗುಡಿಸಲಿನಿಂದ ನೀವು

ಆಚೆಗೆ ಹೋಗಕೂಡದು. ಹಾಗಿದ್ದರೆ ನಿಮ್ಮ ಜೀವ ಉಳಿಯುತ್ತದೆ. ಇಲ್ಲ ವಾದರೆ ಖಂಡಿತವಾಗಿಯೂ ತೊಂದರೆಗೆ ಗುರಿಯಾಗುವಿರಿ. ನಿಮ್ಮ ವೈರತ್ವ ವನ್ನು ಬಿಡಿ. ಇಂದಿನಿಂದ ನಿಮ್ಮಿಬ್ಬರಿಗೂ ದೊರೆ ಆ ಮಾಧವ ಒಡೆಯರು.'

'ಹೌದು ಗುರುವೆ.'

'ವೀರಸಿಂಹ, ನೀನು ನಿನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟಿರುವೆ ನೆಂದು ಒಂದು ಪತ್ರವನ್ನು ರಾಜರಿಗೆ ಬರೆದುಕೊಡು. ಅದಕ್ಕೆ ಕಾರಣ ರಾಜ ನಿಗೆ ನಿನ್ನಲ್ಲಿ ಸಂಶಯ ಹುಟ್ಟಿ ನಿನ್ನ ಹಿಂದೆ ಗೌಪ್ಯವಾಗಿ ದೂತರನ್ನು ಕಳಿ ಸಿದ್ದು ಎಂದು ಸ್ಪಷ್ಟವಾಗಿ ಬರೆ.'

'ಆಗಲಿ.'

ವೀರಸಿಂಹನು ಕಾಗದವನ್ನು ಬರೆದುಕೊಟ್ಟ ಮೇಲೆ 'ನಾನು ಹೋಗಿ ಬರತೇನೆ,' ಎನ್ನುತ್ತ ಬೈರಾಗಿಯು ಅಲ್ಲಿಂದ ಆಚೆಗೆ ಹೋಗಿ 'ರಾಮೂ, ನೋಡಿಕೋ. ಯಾರನ್ನೂ ಬಿಡಬೇಡ' ಅಂದ.

೭

ರಾಜಾರಾಯನ ಕೈಗೆ ಎರಡು ಪತ್ರಗಳು ಬಂದು ತಲುಪಿದವು. ಒಂದು ವೀರಸಿಂಹನಿಂದ ಬಂದಿತ್ತು. ಓದಿಕೊಂಡ.

'ಕೈಲಾಗದವನು! ನನ್ನ ಮೇಲೆ ತಪ್ಪನ್ನು ಹೊರಿಸಿಬಿಟ್ಟಿದ್ದಾನೆ. ಹೇಡಿ. ಕಣ್ಣೆದುರಿಗೆ ಬಂದರೆ ಪ್ರಾಣ ಉಳಿಯುವುದಿಲ್ಲವೆಂದು ಅವನಿಗೆ ಗೊತ್ತು!'

ಮತ್ತೊಂದನ್ನು ನೋಡಿದ; ವಿಚಿತ್ರವಾಗಿತ್ತು. 'ಮಹಾರಾಜರವರಿಗೆ ಮಾಧವ ಒಡೆಯರು ಸಿಕ್ಕಬೇಕೆಂಬಪೇಕ್ಷೆಯಿದ್ದರೆ, ಅವರೊಬ್ಬರೇ ಸಾಮಾನ್ಯ ಉಡುಪನ್ನು ಧರಿಸಿ, ಒಂದು ದೊಣ್ಣೆಯನ್ನು ಹಿಡಿದುಕೊಂಡು, ಹಳದಿಯ ಕಣಿಗಲೆ ಹೂವನ್ನು ತೆಗೆದುಕೊಂಡು, ಅರಮನೆಯ ಎಡಭಾಗದಲ್ಲಿ ಗೊಡ್ಡಿ ಯನ್ನು ಹಿಡಿದು ನಿಂತಿರುವ ಮನುಷ್ಯನ ಬಳಿಗೆ ಬರತಕ್ಕದ್ದು.—'

'ಇದೇನೋ ವಿಚಿತ್ರವಾಗಿದೆ! ಮಹಾರಾಜನಾದ ನನಗೂ ಈ ಕೆಲಸ ವನ್ನು ಕೊಡುವ ಈ ಧೀರ ಯಾರಿರಬಹುದು? ಯಾರಾದರೂ ಇರಲಿ,

ನಾನಂತೂ ಈ ಕೆಲಸ ಮಾಡಬೇಕೆಂದು ನನಗೆ ತೋರುತ್ತಿದೆ. ಹೋಗಿ ನೋಡುತ್ತೇನೆ.'

ಬೇಗ ಬೇಗ ತನ್ನ ಒಡವೆ ವಸ್ತ್ರಗಳನ್ನೆಲ್ಲಾ ತೆಗೆದಿಟ್ಟು, ಸಾಮಾನ್ಯ ಪೋಷಾಕನ್ನು ಧರಿಸಿ ರಾಜಾರಾಯ ಅರಮನೆಯ ಬಾಗಿಲಿಂದೀಚೆಗೆ ಬಂದ ಎಡಭಾಗದಲ್ಲಿ ನೋಡಿದ. ಏನೂ ಕಾಣಲಿಲ್ಲ. ಸ್ವಲ್ಪ ದೂರ ನಡೆದ. ಯಾರೋ ಕುಳಿತಿದ್ದ ಹಾಗೆ ತೋರಿತು. ಹತ್ತಿರಕ್ಕೆ ಬಂದ. ಕುಳಿತಿದ್ದವನು ತನ್ನ ಗೊಡ್ಲಿಯನ್ನು ಸರಿಮಾಡುತ್ತಿದ್ದ. ಕೂಡಲೆ ಹತ್ತಿರಕ್ಕೆ ಹೋಗಿ 'ಸರಿಮಾಡುವುದಕ್ಕೆ ಬೇರೆ ಸ್ಥಳವಿಲ್ಲವೆ?' ಎಂದ ರಾಜಾರಾಯ.

'ಹೌದು ನನ್ನೊಡೆಯ. ಅವರು ಹೇಳಿದರು, ಇಲ್ಲೇ ಕೂತಿರು, ಯಾರಾದರೂ ಬಂದು ಕೇಳಿದರೆ ಅವರನ್ನು ನನ್ನ ಹತ್ತಿರಕ್ಕೆ ಕರೆದುಕೊಂಡು ಬಾ ಎಂತ.'

'ಯಾರು ಹೇಳಿದವರು?'

'ಯಾರೋ ಒಬ್ಬರು ಸ್ವಾಮಿಗಳು.'

'ಎಲ್ಲಿಗೆ?'

'ಇಂಗೇ ಬಾ. ನಮ್ಮೋರು ಯಾರಾದರೂ ಸಿಗೋತನಕ' ಎಂದು ಬಲಗಡೆ ತೋರಿಸಿದ.

'ನಡಿ ಹಾಗಾದರೆ.'

ಇಬ್ಬರೂ ಬಹಳ ದೂರ ಹೋಗುವುದರೊಳಗಾಗಿ ಎದುರಿಗೆ ಮತ್ತೊಬ್ಬ ಬಂದ. ಅವನ ಕೈಯಲ್ಲಿ ಒಂದು ಗೊಡ್ಲಿಯಿತ್ತು. 'ಎಲಾ ಮೂಳ, ಎಷ್ಟೊತ್ತು ನಿನಗಾಗಿ ಕಾಯೋದು!' ಎಂದ.

'ಏ ನಾನೇನು ಮಾಡ್ಲಿ. ಅಪ್ನೋರು ಬರೋದು ತಡವಾಯ್ತು.' ಎಂದ ಮೊದಲನೆಯವ.

'ಸಾಕು, ನೀ ಮಾಡಿದ ಬದ್ಕು. ಇನ್ನು ನಡಿ.'

ರಾಜರ ಕಡೆಗೆ ತಿರುಗಿ 'ನಡೀರಿ ಸ್ವಾಮಿ,' ಎಂದ. ಇಬ್ಬರೂ ಸ್ವಲ್ಪ ದೂರ ಹೋಗುವುದರೊಳಗಾಗಿ ಒಂದು ಕುರಿಮರಿಯನ್ನು ಹೊತ್ತು ಮತ್ತೊಬ ಬಂದ.

'ಸಾಕಪ್ಪ, ನಿನ್ನ ಸಂಗಾತ. ಬೇಗ ಬರುತೀಯೆಂದಲ್ಲೋ!'

'ಇಲ್ಲಪ್ಪ, ನಮ್ಮ ಸ್ವಾಮಿಗಳು ಬರೋದು ಹೊತ್ತಾತಂತೆ!'

'ಒಳ್ಳೇ ಸ್ವಾಮಿಗಳು ನಡಿಯಪ್ಪೋ.' ಎರಡನೆಯವನು ಹೊರಟು ಹೋದ. ಮೂರನೆಯವನು 'ಹೀಗೆ ಬನ್ನಿ ಸ್ವಾಮಿ' ಅಂತ ಎಡಗಡೆ ಹೋಗುತ್ತಿದ್ದ ಒಂದು ಕಾಲುದಾರಿಯಲ್ಲಿ ರಾಜಾರಾಯನನ್ನು ಕರೆದುಕೊಂಡು ಹೋದ. ಅಲ್ಲಿಗೆ ನಾಲ್ಕಾರು ಮೈಲಿ ನಡೆದಂತೆ ಆಗಿತ್ತು. ರಾಜಾರಾಯನಿಗೆ ತಾನು ಈ ಕೆಲಸಕ್ಕೇತಕ್ಕೆ ಬಂದೆನೋ ಎನ್ನಿಸಿತ್ತು ಎದುರಿಗೆ ಒಂದು ದೊಡ್ಡ ಮರದ ಕೆಳಗೆ ಒಂದು ವ್ಯಕ್ತಿ ಶಾಲು ಹೊದ್ದು ನಿಂತ ಹಾಗಿತ್ತು. ಬರುತ್ತ ಬರುತ್ತ ವ್ಯಕ್ತಿಯು ಚೆನ್ನಾಗಿ ಕಾಣಿಸಿತು. ಹತ್ತಿರ ಬರುವ ಹೊತ್ತಿಗೆ ರಾಜನು, 'ಇದೇನು! ನಮ್ಮ ಪಂಡಿತ ಇದ್ದ ಹಾಗಿದೆ!' ಅಂದ.

ಪಂಡಿತ ಮೆಲ್ಲನೆ 'ಹೌದು ಪ್ರಭೂ,' ಎಂದು ಗಟ್ಟಿಯಾಗಿ 'ಸ್ವಾಮಿಗಳು ಹೀಗೆ ಬರಬೇಕು' ಎಂದು ಹೇಳಿ ಜೊತೆಗೆ ಬಂದವನಿಗೆ ಹೋಗುವಂತೆ ಸನ್ನೆ ಮಾಡಿದ. ಅವನು ಹೊರಟುಹೋದ ಮೇಲೆ 'ಮಹಾಸ್ವಾಮಿಗಳು ಅಪರಾಧವನ್ನು ಕ್ಷಮಿಸಬೇಕು' ಅಂದ.

'ಇರಲಿ, ಕಾರ್ಯವಾಗಬೇಕು.'

'ಆಗುತ್ತೆ, ಆದರೆ ತಾವು ಸ್ವಲ್ಪ ವೇಷವನ್ನು ಧರಿಸಬೇಕಾಗುತ್ತೆ. ತಮ್ಮನ್ನು ಹೀಗೆ ನೋಡಿದ ಕೂಡಲೆ ಅವರೆಲ್ಲರೂ ಗುರ್ತುಹಿಡಿದುಬಿಡುತ್ತಾರೆ. ಅನ್ಯಾಯವಾಗಿ ಇಬ್ಬರೂ ಜೀವವನ್ನು ಬಿಡಬೇಕಾಗುತ್ತೆ.'

'ಇನ್ನೇನು ವೇಷ?'

'ಯಾವುದನ್ನು ವಿವರವಾಗಿ ಹೇಳುವುದಕ್ಕೂ ಈಗ ಹೊತ್ತಿಲ್ಲವಾಗಿದೆ. ತಾವು ನನ್ನನ್ನು ನಂಬಬೇಕು. ಇಲ್ಲದಿದ್ದರೆ ಇದುವರೆಗೆ ಮಾಡಿದ್ದಷ್ಟೂ ವ್ಯರ್ಥವಾಗುತ್ತೆ.'

'ಆಗಲಿ.'

'ಹೀಗೆ ಬನ್ನಿ.' ಎಂದು ಪಕ್ಕದಲ್ಲೇ ಇದ್ದ ಒಂದು ಮನೆಯೊಳಕ್ಕೆ ಪಂಡಿತನು ಅವನನ್ನು ಕರೆದುಕೊಂಡು ಹೋದನು. ಇವರು ಒಳಕ್ಕೆ ಹೋದ

ಕೂಡಲೆ ಇಬ್ಬರು ಯುವಕರು ನಮಸ್ಕಾರ ಮಾಡಿದರು. ಪಂಡಿತರು 'ನಮ-ಸ್ಕಾರ — ಇಗೋ ಬೇಗ ಮಾಡಬೇಕು. ನಮ್ಮ ರಾಯರು ಈ ದಿನ ವೇಷವನ್ನು ಹಾಕಲು ಬಂದಿದ್ದಾರೆ.' ರಾಯರಿಗೆ ಬೆರಳು ಸನ್ನೆಯಿಂದ ಸುಮ್ಮನಿರುವಂತೆ ಹೇಳಿ, ಆ ಯುವಕರ ಕಡೆ ತಿರುಗಿ 'ತಿಲೋತ್ತಮೆ' ಎಂದು ಹೇಳಿದರು. ಸುಮಾರು ಅರ್ಧಗಂಟೆಯೊಳಗಾಗಿ ಮುಖಕ್ಕೆಲ್ಲಾ ಬಣ್ಣವನ್ನು ಬಳಿದಿದ್ದಾಯಿತು. ಇನ್ನು ಹದಿನೈದು ನಿಮಿಷದಲ್ಲಿ ಕುಪ್ಪಸವನ್ನು ತೊಡಿಸಿ ಸೀರೆಯನ್ನುಡಿಸಿದ್ದಾಯಿತು. ಪಂಡಿತರು ಎಲ್ಲವೂ ಮುಗಿದ ಮೇಲೆ ನೋಡಿ 'ಇದೀಗ ಸರಿ. ಗುರ್ತುಹಿಡಿಯುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ!' ಎಂದರು.

ಆ ಯುವಕರು 'ಪಂಡಿತರೆ, ಇನ್ನೇನಪ್ಪಣೆ?' ಎಂದರು.

'ಏನೂ ಇಲ್ಲ. ಇನ್ನು ಹತ್ತು ನಿಮಿಷದೊಳಗಾಗಿ ನೀವು ಇಲ್ಲಿಗೆ ಬನ್ನಿ.'

ಯುವಕರು ಹೊರಟುಹೋದರು. ರಾಜಾರಾಯನಿಗೆ ಏನು ಮಾತನಾಡುವುದಕ್ಕೂ ತೋಚದೆ 'ನನಗೇತಕ್ಕೆ ಇದನ್ನೆಲ್ಲಾ ತಂದಿಟ್ಟೆ!' ಅಂದನು.

'ಸ್ವಾಮಿಗಳಿಗೆ ತಿಳಿದಿರಬೇಕು. ಈ ದಿನ ಆಟದಲ್ಲಿ ಮಾಧವ ಒಡೆಯರು ತಮಗೆ ಹಾರವನ್ನು ಹಾಕಿ ಉಂಗುರವನ್ನು ಕೊಡುತ್ತಾರೆ.'

'ನನಗರ್ಥವಾಗಲಿಲ್ಲ!'

'ಈಗ ತಾನೆ ಆಟ್ಟದಾಟವು ಅರ್ಧವಾಗಿದೆ. ಮಾಧವ ಒಡೆಯರು ಆಟವು ಪೂರ್ತಿಯಾದ ಮೇಲೆ ತಿಲೋತ್ತಮೆಯ ಪಾತ್ರವನ್ನು ವಹಿಸಿದ ಆಟಗಾರನಿಗೆ ಉಂಗುರವನ್ನು ಕೊಡುವುದಾಗಿ ಒಪ್ಪಿದ್ದಾರೆ. ಅವರು ಬರುತ್ತಲೇ ತಮ್ಮನ್ನು ಯುವಕರು ಆಟ್ಟದ ಮೇಲೆ ಕರೆದುಕೊಂಡು ಹೋಗುತ್ತಾರೆ. ತಾವು ಅದೇ ಸಮಯದಲ್ಲಿ ಅವರನ್ನು ಹಿಡಿಯಬಹುದು.'

'ನಾನೊಬ್ಬನೇ ಅವನನ್ನು ಹಿಡಿಯುವುದಕ್ಕೆ ಸಾಧ್ಯವೆ?' ಎಂದು ತನ್ನ ಮನಸ್ಸಿನಲ್ಲೇ ಅಂದುಕೊಂಡರೂ 'ತಾನು ರಾಜನಲ್ಲವೆ? ತನ್ನ ಮಾತೇ ಸಾಕೆಂದು' ಸಮಾಧಾನಪಟ್ಟುಕೊಂಡನು ಆ ರಾಜ.

ಆಟವು ಮುಗಿಯಿತೆಂದು ಜನರು ಬಂದು ಹೇಳಿದರು. ಕೂಡಲೆ ಇಬ್ಬರು ಯುವಕರು ಬಂದರು. ಅವರೊಡನೆ ತಿಲೋತ್ತಮೆ ಹೊರಟಳು.

ಹೋಗಿ ಅಟ್ಟದ ಮೇಲೆ ನಿಂತಳು. ಮಾಧವ ಒಡೆಯ ತನ್ನ ಆಪ್ತನಾದ ವಿಜಯನೊಡನೆ ಮೇಲಕ್ಕೆ ಬಂದ.

'ನಮ್ಮ ನಾಡಿನ ಕಲೆಗೆ ನಾವು ಉತ್ತೇಜನ ಕೊಡುವುದು ನಮ್ಮ ಧರ್ಮ. ಈ ದಿನ ನಾನು ನಿಮಗೆ ಮತ್ತೊಂದು ಮಾತನ್ನು ಹೇಳುತ್ತಿದ್ದೇನೆ. ತಾವು ಸಾವಧಾನದಿಂದ ಕೇಳುವುದಾದರೆ.'

'ಹೇಳಿ ಹೇಳಿ' ಅಂದರು ಜನ.

'ಇಲ್ಲಿ ನಿಮಗೆಲ್ಲರಿಗೂ ಆಪ್ತನಾದವ ರುಸ್ತುಮ.'

'ಹೌದು, ಹೌದು.'

'ಅವನು ಈ ದಿನ ಪಾತ್ರವನ್ನು ವಹಿಸಿ ಇಲ್ಲಿ ತನ್ನ ಪಟ್ಟಾವರಸೆ ನಿಮಗೆ ತೋರಿಸಬೇಕಾಗಿತ್ತು.'

'ಅವನೆಲ್ಲಿ?'

'ಅವನನ್ನು ನಮ್ಮ ದೊರೆಗಳು ಜೈಲಿನಲ್ಲಿಟ್ಟದ್ದಾರೆ.'

'ಏತಕ್ಕೆ?'

'ಸಾವಧಾನವಾಗಿ ಕೇಳಬೇಕು. ಅದಕ್ಕೆ ನಾನೇ ಕಾರಣ. ನಾನು ಕುಸ್ತಿಮಾಡಿದ ದಿನ ರುಸ್ತುಮ ನೋಡೋದಕ್ಕೆ ಬಂದಿದ್ದನಂತೆ. ಅವನು ರಾಜಿಯ ಮಂಟಪದಲ್ಲಿ ಕುಳಿತ ತಪ್ಪಿಗೆ ಅವನಿಗೆ ಹೀಗಾಗಿದೆ.'

'ಇದು ಸರಿಯಲ್ಲ.'

'ರಾಜಿ ಯಾರು?' ಎಂದು ಒಬ್ಬ ಮುದುಕ ಕೇಳಿದ.

'ಅವಳು ನಮ್ಮ ಮಹಾರಾಜನ ಅಂತರಂಗದ ಊಳಿಗದವಳ ತಂಗಿ.'

'ನಮ್ಮ ಮಹಾರಾಜರು ಕೇವಲ ಸಾತ್ವಿಕರು. ಅವರು ನ್ಯಾಯವಾದಿಗಳು. ಅವರೆಂದಿಗೂ ಅನ್ಯಾಯವನ್ನು ಮಾಡತಕ್ಕವರಲ್ಲ. ಅವರಿಗೆ ವಿಚಾರ ತಿಳಿಯದೆ ರುಸ್ತುಮನನ್ನು ಬಂದಿಯಾಗಿ ಮಾಡಿರಬಹುದು.' ಎಂದ ಆ ಮುದುಕ.

'ಇಷ್ಟಕ್ಕೇ ಅವನನ್ನು ಬಂದೀಖಾನೆಯಲ್ಲಿ ಹಾಕುವುದೆ?' ಎಂದ ಒಬ್ಬ ಯುವಕ.

'ಅಷ್ಟಕ್ಕಲ್ಲ, ಹೇಳುತ್ತಿದ್ದೇನೆ ಕೇಳಿ. ರಾಜಿ ರುಸ್ತುಮನನ್ನು ಹೊಡೆಸಲು ನಾಲ್ಕು ಮಂದಿ ಗುಂಡರನ್ನು ಗೊತ್ತುಮಾಡಿದಳು. ತನ್ನ ಪ್ರಾಣವನ್ನುಳಿಸಿ ಕೊಳ್ಳಲು ರುಸ್ತುಮನು ಅವರ ಕೈಕಾಲು ಮುರಿಯಬೇಕಾಯಿತು.'

'ಭಲೇ ರುಸ್ತುಮ!' ಎಂದರು ಜನರು.

'ಅಲ್ಲ, ಇದಕ್ಕೂ ಈ ಆಟಕ್ಕೂ ಏನು ಸಂಬಂಧ? ಇಲ್ಲೀತಕ್ಕೆ ಆ ವಿಚಾರ?' ಎಂದ ಆ ಮುದುಕ.

'ಅದೇ ತಮಗೆ ಹೇಳುತ್ತಿದ್ದೇನೆ. ನನಗಾಗಿ ನಾನು ನಿಮ್ಮಲ್ಲಿ ಒಂದು ಮಾತೂ ಹೇಳುತ್ತಿಲ್ಲ. ರುಸ್ತುಮನು ನಿಮಗೆ ಬೇಕಾದವನು. ಅವನನ್ನು ನೀವು ಬಿಡಿಸಿಕೊಳ್ಳಬಹುದು.'

'ಹೌದು, ನಾವೆಲ್ಲರೂ ಅರಮನೆಗೆ ಹೋಗೋಣ. ರಾಜರನ್ನು ಎದು ರಿಗೇ ನೋಡಿ ಕೇಳೋಣ.' ಎಂದ ಯುವಕ.

'ಅದು ಅಗತ್ಯವಿಲ್ಲ. ರಾಜರು ತಮ್ಮ ಮುಂದೆಯೆ ಬರುತ್ತಾರೆ. ಆಗ ಅವರನ್ನು ಕೇಳಿ.'

'ನಮ್ಮ ಮುಂದೆ!'

'ಹೌದು. ನನ್ನನ್ನು ದಸ್ತಗಿರಿ ಮಾಡುವುದಕ್ಕಾಗಿ ಅವರು ಇಲ್ಲಿಗೇ ಬರುತ್ತಾರೆ. ಆದರೆ ವೇಷವನ್ನು ಹಾಕಿಕೊಂಡು ಬರುತ್ತಾರೆ. ಈಗ ನಿಮಗೆ ಒಂದು ಪ್ರಶ್ನೆ ಕೇಳುತ್ತಿದ್ದೇನೆ. ನನಗೂ ರಾಜರಿಗೂ ಚೆನ್ನಾಗಿಲ್ಲವೆಂಬ ವಿಚಾರ ನಿಮಗೆ ತಿಳಿದಿದೆ. ಈ ದಿನ ನನ್ನ ತಲೆಯ ಮೇಲೆ ರಾಜರು ಎರಡು ಸಾವಿರ ರೂಪಾಯಿ ಬೆಲೆ ಹಾಕಿದ್ದಾರೆ. ನಿಮ್ಮಲ್ಲಿ ಯಾರಾದರೂ ನನ್ನನ್ನು ಹಿಡಿದು ರಾಜರಿಗೆ ಒಪ್ಪಿಸಿದರೆ ಅವರಿಗೆ ಎರಡು ಸಾವಿರ ರೂಪಾಯಿ ಬಹು- ಮಾನ ಸಿಗುತ್ತದೆ. ನೀವೇ ನಿರ್ಧರಿಸಬೇಕು—ನಾನು ಬೇಕೋ ನಿಮಗೆ ಅಥವಾ ರಾಜರು ಬೇಕೋ ಎಂಬುದನ್ನು ನಿರ್ಧರಿಸಿರಿ.'

ಎಲ್ಲರೂ ಗುಸಗುಸ ಎಂದು ಮಾತನಾಡಲು ಮೊದಲಾಯಿತು. ನಾಲ್ಕಾರು ಯುವಕರು ದೊಣ್ಣೆಗಳನ್ನು ತೆಗೆದುಕೊಂಡು ಗುಂಪಿನ ಈಚೆ ಬಂದು ನಿಂತುಕೊಂಡರು. ಮೊದಲು ಮಾತನಾಡಿದ ಮುದುಕ ಮೇಲಕ್ಕೆದ್ದ.

'ಮಾಧವ ಒಡೆಯರ ಅಪರಾಧವೇನು?'

ಮಾಧವ ಒಡೆಯನೇ ಹೇಳಿದ. 'ನನ್ನ ಮೇಲಿನ ಅಪರಾಧದ ವಿಚಾರ ವಾಗಿ ನಾನೀಗ ಇಲ್ಲಿ ಹೇಳಲಾರೆ. ಆದರೆ ಅದು ಸುಳ್ಳು. ನಾನು ಮಂತ್ರಿ ಯವರ ಚಿಕ್ಕ ಪತ್ನಿಯವರನ್ನು ಮೋಹಿಸಿ ಅವರೊಡನೆ ಸರಸಸಲ್ಲಾಪಕ್ಕಾಗಿ ಅಲ್ಲಿಗೆ ಹೋಗುತ್ತಿದ್ದೇನೆಂದು ಮಂತ್ರಿಯವರೇ ತಪ್ಪನ್ನು ಹೊರಿಸಿದ್ದಾರೆ. ಆದರೆ ಇದು ನಿಜವಲ್ಲ. ನಿಜವಾದ ವಿಷಯವನ್ನು ಈಗ ನಿಮ್ಮ ಮುಂದೆ ಹೇಳಲಾರೆ. ನನ್ನ ಮಾತಿನಲ್ಲಿ ನಂಬಿಕೆಯಿಡಬೇಕೆಂದು ಮಾತ್ರ ನಿಮ್ಮನ್ನು ಕೇಳಿಕೊಳ್ಳು ತ್ತೇನೆ.'

'ನಿಮ್ಮ ತಾತಂದಿರು ಧರ್ಮಪುರುಷರು. ಅಂತಹವರ ವಂಶದಲ್ಲಿ ಹುಟ್ಟಿ ನೀವೆಂದಿಗೂ ನೀಚ ಕೆಲಸವನ್ನು ಮಾಡಲಾರಿರಿ. ಸಿಂಹದ ಮರಿಯು ಆನೆಯ ಕುಂಭಸ್ಥಳವನ್ನು ಸೀಳುವುದಲ್ಲದೆ ಹುಲ್ಲು ತಿಂದು ಬದುಕುವುದಿಲ್ಲ. ಈ ಮಾತು ನಿಜ. ನಮಗೆ ನಿಮ್ಮಲ್ಲಿ ನಂಬಿಕೆ ಇದೆ. ನಮಗೆ ನೀವೇ ಬೇಕು.'

ಎಲ್ಲರೂ ಚಪ್ಪಾಳೆ ಹೊಡೆದರು. ಕೆಲವರು ಸಿಳ್ಳು ಹಾಕಿದರು. ಒಂದು ದೊಡ್ಡ ಹೂವಿನ ಹಾರವು ಬಂತು. ಮಾಧವ ಒಡೆಯನು ತಿಲೋತ್ತಮೆಗೆ ಹಾಕಿ 'ಈ ದಿನ ನಿಜವಾಗಿಯೂ ಒಂದು ಮಹತ್ತರವಾದ ದಿನ. ಕೇವಲ ಒಬ್ಬ ನಟನನ್ನು ಮಹಾರಾಜರು ಕರೆಸುವುದೆಂದರೆ ಅತಿಶಯವೇ. ಈ ನಮ್ಮ ತಿಲೋತ್ತಮೆಯನ್ನು ಮಹಾರಾಜರೇ ಕರೆದಿದ್ದಾರೆ. ನಾವೆಲ್ಲರೂ ಈಕೆಯನ್ನು ನಿಜವಾಗಿ ತಿಲೋತ್ತಮೆಯಂತೆ ಭಾವಿಸಿ ಅರಮನೆಗೆ ಕೊಟ್ಟುಕಳಿಸಬೇಕು.' ಎಂದು ಹೇಳುವ ಹೊತ್ತಿಗೆ, ಎಂಟು ಜನ ಯುವಕರು ಒಂದು ಮೇಣೆ ತೆಗೆದು ಕೊಂಡು ಬಂದರು.

ಅದುವರೆವಿಗೂ ರಾಜನ ಮನಸ್ಸು ಡವಡವ ಹೊಡೆದುಕೊಳ್ಳುತ್ತಿತ್ತು ಮಾಧವ ಒಡೆಯನು ತನ್ನನ್ನು ಗುರುತಿಸಿದನೆಂದು ಅವನಿಗೆ ಚೆನ್ನಾಗಿ ತಿಳಿ- ಯಿತು. ಒಬ್ಬನೇ ಬಂದಿದ್ದು ಸರಿಯಲ್ಲವೆಂದು ತೋರಿತು. ಆದರೆ ಮಾಡ ತಕ್ಕದ್ದೇನು? ಇನ್ನೇನು ತೊಂದರೆ ಬರುತ್ತೆ ಎನ್ನುವ ಹೊತ್ತಿಗೆ ಮಾಧವ ಒಡೆಯನು ಅವನ ಮಾನ-ಪ್ರಾಣಗಳನ್ನುಳಿಸಿದ.

ಅಷ್ಟರಲ್ಲಿ ಮುದುಕನೆದ್ದು 'ಮಹಾರಾಜರು ಇಲ್ಲಿಗೇ ಬರತಾರೆ ಎಂದಿರಲ್ಲಾ' ಎಂದ.

'ಬರಬೇಕಾಗಿತ್ತು. ಬಂದರೂ ಬಂದಿರಬಹುದು. ಆದರೆ ಅವರು ಆಟಗಾರರ ಯಜಮಾನನಿಗೆ ಹೇಳುತ್ತೇನೆಂದು ಹೇಳಿದ್ದರಂತೆ. ನೇಮಿಚಂದ್ರನಿಗೆ ತಿಳಿದಿರಬೇಕು.'

ಎಲ್ಲರೂ 'ನೇಮಿಚಂದ್ರ ನೇಮಿಚಂದ್ರ' ಎಂದು ಒದರಿದರು.

ನೇಮಿಚಂದ್ರ ಪಂಡಿತನು ಒಳಗಿನಿಂದ ಬಂದ. 'ಕಲ್ಯಾಣಮಸ್ತು' ಎಂದ.

'ಎಲ್ಲಿ ಮಹಾರಾಜರು?' ಎಂದರು.

'ಸಭಿಕರಿಗೆ ತಿಳಿಸುವುದಕ್ಕೆ ಬಹಳ ಸಂಕೋಚವಾಗುತ್ತೆ.' ಎಂದ ಪಂಡಿತ.

ತಿಲೋತ್ತಮೆಗೆ ಪಂಚಪ್ರಾಣಗಳು ಉಕ್ಕಿ ಬಂದವು. ಪಂಡಿತನ ಕಡೆ ನೋಡಿದಳು.

'ಏನು ಅಂತಹ ಸಂಕೋಚ' ಎಂದ ಮುದುಕ.

'ಮಹಾಸ್ವಾಮಿಗಳು ಇಲ್ಲಿಗೆ ಬರಬೇಕೆಂದು ಹೊರಟರಂತೆ, ಅಷ್ಟರಲ್ಲಿ ರಾಜಕಾರ್ಯಕ್ಕಾಗಿ ನಿಲ್ಲಬೇಕಾಯಿತಂತೆ. ಅಲ್ಲದೆ ಅವರು ತಾವೇ ಬಂದು ತಿಲೋತ್ತಮೆಗೆ ಉಪಚಾರ ಮಾಡಬೇಕೆಂದು ಯೋಚನೆಮಾಡಿದ್ದರು. ಅದು ಆಗದೆ ಇದ್ದುದರಿಂದ ಆಟದಲ್ಲಿದ್ದ ತಿಲೋತ್ತಮೆಯನ್ನು ಹಾಗೆಯೆ ಅರಮನೆಗೆ ಕಳಿಸಿಕೊಡಬೇಕೆಂದು ಹೇಳಿಕಳಿಸಿದ್ದಾರೆ. ಅವರು ಬಹಳ ರಸಿಕರು.'

ತಿಲೋತ್ತಮೆ ಮೇಣೆಯಲ್ಲಿ ಕುಳಿತಳು. ಬೋಯಿಗಳಂತೆ ಎಂಟು ಮಂದಿ ಯುವಕರು ಅದನ್ನು ಹೊತ್ತುಕೊಂಡರು. ಅದು ಅರಮನೆಯ ಕಡೆಗೆ ಹೊರಟಿತು.

ಮಾಧವ ಒಡೆಯನು ನೇಮಿಚಂದ್ರನ ಬೆನ್ನನ್ನು ತಟ್ಟಿದ.

'ಪಂಡಿತನೆಂದರೆ ಸಾಮಾಜಿಕನೂ ಹೌದು ಸಾಮಂತನೂ ಹೌದು.'

'ಎಲ್ಲಾ ಸ್ವಾಮಿಗಳ ದಯೆ. ತಮ್ಮ ಸಹಾಯದಿಂದ ಬೆಳೆದ ಈ ದೇಹ ಮನಸ್ಸುಗಳೆರಡೂ ತಮಗಾಗಿಯೆ ಇವೆ.'

'ನನ್ನನ್ನು ಹೊಗಳಬೇಡ ಎಂದು ಎಷ್ಟು ಸಲ ನಿನಗೆ ಹೇಳಬೇಕು?'

'ಸ್ವಾಮಿ, ಇಷ್ಟಕ್ಕೆ ಮುಗಿಯಲಿಲ್ಲ. ರಾಜಾರಾಯನ ಬುದ್ಧಿ ಬಹಳ ಒಳ್ಳೆಯದಲ್ಲ. ಈ ಕೆಲಸದಿಂದ ನಿಮಗೆ ಇನ್ನೂ ತೊಂದರೆ ಹೆಚ್ಚಾಗುತ್ತೆ. ತಾವು ಬಹಳ ಜಾಗರೂಕರಾಗಿರಬೇಕು.'

ಸೋತದ್ದನ್ನು ಒಪ್ಪಿಕೊಳ್ಳುವುದಕ್ಕೂ ಒಂದು ಶಕ್ತಿ ಬೇಕು. ಒಂದು ಧೈರ್ಯ ಬೇಕು. ಸಂಸ್ಕೃತಿ ಜೀವನ ಇವುಗಳ ಸಮ್ಮೇಳನದಿಂದ ಇಂತಹ ಒಂದು ಧೈರ್ಯ ಯಾರಿಗಾದರೂ ಬರುತ್ತದೆ. ಆದರೆ ಮನಸ್ಸು ಕೇವಲ ಸಂಕುಚಿತವಾದ ಮನುಷ್ಯನಿಗೆ ಸೋಲು-ಗೆಲುವಿನ ಅರ್ಥ ಹಿಡಿಯುವುದು ಕಷ್ಟ. ತನ್ನ ಕೈಲಾಗದೆ ಸೋತನೆಂಬುದನ್ನು ತಿಳಿದುಕೊಳ್ಳುವುದು ಅತಿ ಸುಲಭ; ಆದರೆ ಮನುಷ್ಯನಲ್ಲಿರುವ ಅಹಂಕಾರವು ಇದನ್ನು ತಡೆಯುವುದಿಲ್ಲ. ಯಾವ ಮನುಷ್ಯನೇ ಆಗಲಿ, ತನ್ನ ಕೈಲಾಗದೆ ಸೋತೆನೆನ್ನುವುದಿಲ್ಲ. ಯಾವಾಗಲೂ ಮತ್ತೊಬ್ಬರ ಮೇಲೆ ತಪ್ಪನ್ನು ಹೊರಿಸಿ ತಮ್ಮ ಸೋಲಿನ ವಿಷಯವನ್ನು ಅವರ ಮೇಲೆ ಕುಕ್ಕುವುದಕ್ಕೇ ಪ್ರಯತ್ನಪಡುತ್ತಾನೆ.

ರಾಜಾರಾಯನ ಪ್ರಕೃತಿ ಹೀಗೆಯೇ ಇತ್ತು. ಮಾಧವ ಒಡೆಯನ ಮೇಲೆ ಅವನ ದ್ವೇಷವು ಮತ್ತಷ್ಟು ಹೆಚ್ಚಿತು.

೮

ಮಾಧವ ಒಡೆಯನ ಜನರು ತನ್ನ ಪಟ್ಟಣದಲ್ಲಿ ಹಲವರಿದ್ದಾರೆಂದು ಅವನಿಗೆ ತಿಳಿಯಿತು. ರುಸ್ತುಮನನ್ನು ಬಿಟ್ಟರೆ ಅವನೇ ತನ್ನ ಮೇಲೆ ಕತ್ತಿ ಕಟ್ಟಿ ಜನರನ್ನು ರೇಗಿಸಬಹುದೆಂದು ರಾಜನಿಗೆ ತೋರಿತು. ಎಲ್ಲೆಲ್ಲಿ ಮಾಧವ ಒಡೆಯನಿಗೆ ಬೇಕಾದವರಿದ್ದಾರೆಂದು ತನ್ನ ಗೂಢಚಾರರಿಂದ ತಿಳಿದು ಬಂದಿತೋ ಅಲ್ಲಲ್ಲಿ ಅವರಿಗೆ ತೊಂದರೆ ಕೊಡುವಂತೆ, ತನ್ನ ಅಧಿಕಾರಿಗಳಿಗೆ ಆಜ್ಞಾಪಿಸಿದನು. ಅವನ ಆಜ್ಞೆಯನ್ನು ಯಾವ ಅಧಿಕಾರಿಯೂ ಉಲ್ಲಂಘಿಸುವಂತಿರಲಿಲ್ಲ; ಆದರೆ ಆ ಆಜ್ಞೆ ಬಹಳ ಅನ್ಯಾಯವೆಂದು ಅವರಿಗೇ ತೋರುತ್ತಿತ್ತು.

ತಿಲೋತ್ತಮೆಯನ್ನು ಅರಮನೆಗೆ ಕರೆಸಿಕೊಂಡ ವಿಚಾರ ಎಲ್ಲರಿಗೂ ಗೊತ್ತಾಯಿತು. ಆದರೆ ತಿಲೋತ್ತಮೆಯ ಪಾತ್ರವನ್ನು ವಹಿಸಿದವನನ್ನು ಕೇಳಿದರೆ ತನಗೆ ಯಾವ ವಿಚಾರವೂ ಗೊತ್ತಿಲ್ಲವೆಂದ. ತಾನು ಆ ದಿನ ಆಟ್ಟ ದಾಟವು ಮುಗಿದ ಕೂಡಲೆ ಯಾರಿಗೂ ಹೇಳದೆ ಹೋಗಬೇಕೆಂದು ನೇಮಿ ಚಂದ್ರನು ಕಟ್ಟು ಮಾಡಿದ್ದ ವಿಚಾರ ಜನರಿಗೆ ನಿಧಾನವಾಗಿ ತಿಳಿದುಬಂದಿತು. ಎಲ್ಲೆಲ್ಲಿಯೂ ಜನರು 'ಆ ತಿಲೋತ್ತಮೆ ಯಾರು?' ಎನ್ನುವುದಕ್ಕೆ ಮೊದಲು ಮಾಡಿದರು. ಇಷ್ಟರಲ್ಲೇ ಅರಮನೆಯಿಂದ ಒಂದು ಆಜ್ಞೆ ಬಂತು: ಆ ಊರಿನಲ್ಲಿ ಪುನಃ ರಾಜರು ಅಪ್ಪಣೆ ಕೊಡುವ ವರೆಗೂ ಆಟ್ಟದಾಟಗಳನ್ನು ಆಡಕೂಡದೆಂದು. ಹಾಗೆ ಹದ್ದು ಮೀರಿ ಆಡುವವರಿಗೆ ರಾಜರು ಗಡೀಪಾರು ಮಾಡುತ್ತಾರೆಂತಲೂ ಸುದ್ದಿಯು ಬಂತು.

ತಿಲೋತ್ತಮೆಯ ವಿಚಾರವನ್ನು ಹೇಳಲು ಶಕ್ತಿಯಿದ್ದ ಯುವಕರು ಇಬ್ಬರೇ—ಮಾಧವ ಒಡೆಯರು ಅಥವಾ ನೇಮಿಚಂದ್ರಪಂಡಿತರು. ಆದರೆ ಅವರಿಬ್ಬರೂ ಊರಲ್ಲೇ ಇಲ್ಲವೆಂದು ಸುದ್ದಿ ಹರಡಿತು.

ಜನರಿಗೆ ಏನೋ ಒಂದು ವಿಧವಾದ ಭಯವು ಹುಟ್ಟಿತು.

೬

'ಆಮೇಲೆ?'

'ಮಾಧವ ಒಡೆಯ ತನ್ನ ಪಿಸ್ತೂಲನ್ನು ತೋರಿಸಿದ. ಜನರು ಹಿಡಿಯುವುದಕ್ಕಾಗಲಿಲ್ಲ. ತಪ್ಪಿಸಿಕೊಂಡ. ಅವನ ಶಿಷ್ಯರ ಪೈಕಿ ಕೆಲವರು ನ್ಯಾಯಾಸ್ಥಾನದಲ್ಲಿ ಅಧಿಕಾರಿಗಳಿಗೆ ಅಡ್ಡಿಮಾಡಿದರು.'

'ಅವರ ಗತಿ?'

'ಅವರೆಲ್ಲರಿಗೂ ರಾಜಾರಾಯ ಮರಣದಂಡನೆಯನ್ನು ವಿಧಿಸಿದ್ದಾನೆ. ಆದರೆ ಅವರನ್ನು ಹಿಡಿದುಕೊಡುವವರು ಯಾರೂ ಇಲ್ಲವಾಗಿದೆ.!

'ನನ್ನ ಕೆಲಸ?'

'ನೀವು ಅಪ್ಪಣೆ ಕೊಟ್ಟ ಹೊರತು ಮಾಧವ ಒಡೆಯರು ವಿಚಾರವನ್ನು ಯಾರಿಗೂ ಹೇಳುವುದಿಲ್ಲವೆನ್ನುತ್ತಾರೆ.'

ಚಿತ್ರಾಬಾಯಿ ಇದನ್ನೆಲ್ಲವನ್ನೂ ಕೇಳುತ್ತಿದ್ದಳು. ಬೈರಾಗಿಯ ಮಾತನ್ನು ಕೇಳಿದ ಕೂಡಲೆ ಅತಿ ದೀರ್ಘವಾಗಿ ಯೋಚನೆಮಾಡಿದಳು.

'ನೀವೇ ಇವಕ್ಕೆ ಸರಿಯಾಗಿ ಸಲಹೆ ಕೊಡತಕ್ಕವರು. ನಾನು ನನ್ನ ತಂಗಿಯ ವಿಚಾರವನ್ನು ಬೈಲಿಗಿಟ್ಟರೆ ಎಲ್ಲರಿಗೂ ತೋರಿದರೆ. ನಮ್ಮ ಮನೆಗೇ ಸರ್ವನಾಶವನ್ನು ಆ ರಾಜಾರಾಯ ತಂದಿಡುವುದರಲ್ಲಿ ಸಂದೇಹವಿಲ್ಲ.'

'ಅದೇನೋ ನಿಜ. ಹಾಗಾದರೆ ಈಗಿನ ಸಂದರ್ಭದಲ್ಲಿ ಸುಮ್ಮನಿರುವುದೇ ಸರಿಯೆಂದು ತೋರುತ್ತೆ. ಆದರೆ ಮಾಧವ ಒಡೆಯನನ್ನು ಇಲ್ಲಿಗೆ ಬಾರದಂತೆ ಹೇಳಬೇಕಲ್ಲ.'

'ಅದು ನನಗೆ ಸಾಧ್ಯವೆ?'

'ಯಾಕಲ್ಲ? ವಿಚಾರವನ್ನು ತಿಳಿಸಿದರೆ ತಾನಾಗಿಯೆ ಮಾಧವ ಒಡೆಯನು ಬರುವಂತಿಲ್ಲ.'

'ನಾನು ಯೋಚನೆ ಮಾಡುತ್ತೇನೆ. ಆದರೆ ಈ ವಿಚಾರದಲ್ಲಿ ನೀವೂ ಯೋಚನೆಮಾಡಿ ಸಲಹೆ ಕೊಡಬೇಕು.'

'ಆಗಲಿ.'

ಬೈರಾಗಿಯು ಅಲ್ಲಿಂದ ಹೊರಟ. ತನ್ನ ಗುಡಿಸಲಿಗೆ ಹೋದ. ಅಲ್ಲಿ ವೀರಸಿಂಹ ದುರಧರ ಇಬ್ಬರೂ ಕಾದಿದ್ದರು. ಬಹಳ ಹೊತ್ತು ಅವರೊಡನೆ ಮಾತನಾಡುತ್ತಿದ್ದ.

## ೧೦

ನೇಮಿಚಂದ್ರ ಪಂಡಿತನು ಮಾಧವ ಒಡೆಯನ ಶಿಷ್ಯರಿಗೆ ರಸವಿಚಾರವನ್ನು ತಿಳಿಸುತ್ತಿದ್ದ. ಎಲ್ಲರೂ ಕೇಳುತ್ತಿದ್ದರು.

ಧೀರೋದಾತ್ತ ನಾಯಕನಲ್ಲಿ ಹೇಗೆ ಒಳ್ಳೆ ಗುಣಗಳೇ ತುಂಬಿರುತ್ತವೋ

ಹಾಗೆ ಧೀರೋದ್ಧತನಲ್ಲಿ ದರ್ಪಮಾತ್ಸರ್ಯಗಳು ಮಾಯಮೋಸಗಳು ತುಂಬಿರುತ್ತವೆ. ಉದಾಹರಣೆಗಾಗಿ ಹೇಳುತ್ತೇನೆ. ಇಲ್ಲಿನ ಚರಿತ್ರೆಯಲ್ಲಿಯೆ ನಮಗೆ ಧೀರೋದ್ಧತ ಸಿಗುತ್ತಾನೆ. ಮಾಧವ ಒಡೆಯರ ತಾತಂದಿರು ಬಹಳ ಒಳ್ಳೆಯವರು. ಅವರು ಮೋಸವನ್ನರಿಯರು. ಅವರ ದೊಡ್ಡ ಮಗ ದಂಡೆತ್ತಿ ಹೋಗಿ ಮಾಳವ ದೇಶದಲ್ಲಿ ಮಡಿದ. ಅಳಿಯನೇ ಎಲ್ಲವನ್ನೂ ನೋಡಿಕೊಳ್ಳುತ್ತಿದ್ದ.'

'ಅಂದರೆ?'

'ಅಂದರೆ ಈಗಿನ ರಾಜಾರಾಯ.'

'ಅಂದರೆ ಅಳಿಯನಿಗೆ ರಾಜ್ಯ ಬಂದದ್ದು ಹೇಗೆ?'

'ಅದನ್ನೇ ಇಲ್ಲಿ ಧೀರೋದ್ಧತ ನಾಯಕನ ಉದಾಹರಣೆಗಾಗಿ ಹೇಳುತ್ತಿದ್ದೇನೆ. ದೊಡ್ಡ ಮಗನು ಮಡಿದ ಮೇಲೆ ಮುದುಕನಾದ ರಾಜನಿಗೆ ಏನೂ ಬೇಕಾಗಿರಲಿಲ್ಲ. ಮಡಿದ ಒಂದು ತಿಂಗಳಿಗೆ ಮಾಧವ ಒಡೆಯರ ಜನನವಾಯಿತು. ಆ ವರ್ಷದೊಳಗಾಗಿ ಮಾಧವ ಒಡೆಯರ ತಾಯಿಯೂ ಕೂಡ ತನ್ನ ಗಂಡನನ್ನು ಸೇರಿದಳು. ಮುದಿ ದೊರೆ ರಾಜ್ಯವನ್ನು ಅಳಿಯನ ಕೈಲಿಟ್ಟು ಮಗುವನ್ನು ನೋಡಿಕೊಳ್ಳುವುದರಲ್ಲಿ ಕಾಲವನ್ನು ಕಳೆದ. ಆ ಮಡಿದ ದೊಡ್ಡ ಮಗನ ಆಪ್ತಸ್ನೇಹಿತ ಮಾಧವ ಒಡೆಯರಿಗೆ ಆಳಾಗಿ ತನ್ನ ಜೀವಮಾನವನ್ನೇ ಅವನಿಗೆ ಒಪ್ಪಿಸಲು ನಿಂತು ಮನೆಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದ.

ತನ್ನ ಅಳಿಯ ತನಗೆ ಆಪತ್ತನ್ನುಂಟುಮಾಡುತ್ತಾನೆಂದು ಮುದಿರಾಜನು ತಿಳಿದಿರಲಿಲ್ಲ. ಅಷ್ಟರಲ್ಲಿ ಹಸ್ತಸಾಮುದ್ರಿಕಾ ಶಾಸ್ತ್ರವನ್ನು ಬಲ್ಲ ಪಂಡಿತನೊಬ್ಬನು ಈ ಊರಿಗೆ ಬಂದ. ದೊರೆಯು ಅವನನ್ನು ಕರೆಸಿದ. ಮಾಧವ ಒಡೆಯರ ಕೈಯನ್ನೂ ತನ್ನ ಕೈಯನ್ನೂ ತೋರಿಸಿದ.'

'ಅದನ್ನು ನಂಬುವುದುಂಟೆ?' ಎಂದ ಒಬ್ಬ ಶಿಷ್ಯ.

'ಹಾಗಲ್ಲ. ಶಾಸ್ತ್ರ ನಿಜ. ಆದರೆ ಹೇಳುವವರು ಮಾಯಾವಿಗಳಿರಬಹುದು. ಮುಂದೆ ನಡೆದ ವಿಚಾರದಿಂದ ಇದು ಕೂಡ ವ್ಯಕ್ತವಾಗುತ್ತದೆ.'

'ಆಮೇಲೆ?'

‘ಮಾಧವ ಒಡೆಯರ ಕೈನೋಡಿ, ಆ ಪಂಡಿತ ಹೇಳಿದನಂತೆ—ಈತನು ರಾಜನಾಗುತ್ತಾನೆ. ಈತನಿಗೆ ಪ್ರಜೆಗಳ ಬೆಂಬಲ ಬಹಳವಿರುತ್ತೆ. ಆದರೆ ಮೂವತ್ತನೆಯ ವಯಸ್ಸಿನ ವರೆಗೆ ಬಹಳ ತೊಂದರೆಗಳಿವೆ. ಈ ಕೈನೋಡಿ ದರೆ ಭಾರತದ ಭೀಮಸೇನ ಜ್ಞಾಪಕಕ್ಕೆ ಬರುತ್ತೆ ಎಂದನಂತೆ ’

‘ರಾಜರಿಗೆ ಏನು ಹೇಳಿದ?’

‘ಅದೇ ಹೇಳುತ್ತಿದ್ದೇನೆ. ರಾಜರ ಕೈನೋಡಿ. ನಿಮಗೆ ವಯಸ್ಸಾ-ದಾಗ್ಯೂ ನಿಮಗೆ ವಿಷದಿಂದ ಕೊನೆಯೆಂದು ಕಾಣುತ್ತೆ. ನೀವು ಬಹಳ ಹುಷಾರಾಗಿರಬೇಕು—ಎಂದನಂತೆ.’

‘ಅದಕ್ಕೆ ರಾಜರು ಏನಂದರು?’ ಎಂದ ಒಬ್ಬ.

‘ಇದೇ ರಾಜರಾಗಿದ್ದರೆ ಪಂಡಿತರನ್ನು ಅಲ್ಲಿಯೇ ಮುಗಿಸುತ್ತಿದ್ದ!’ ಎಂದ ಮತ್ತೊಬ್ಬ.

‘ಆದೇ ಧೀರೋದ್ಧತನಲ್ಲಿ ಒಂದು ಗುಣ ತಿಳಿಯಿತೆ’ ಎಂದು ಪಂಡಿತ ಮುಂದೆ ಹೇಳತೊಡಗಿದ. ‘ಅದಕ್ಕೆ ಮುದಿರಾಜರು ಕೇಳಿದರು ವಿಷದಿಂದ ಎಂದರೆ—ಜಂಗಮವೆ ಸ್ಥಾವರವೆ? ಎಂದು. ಅದಕ್ಕೆ ಆ ಪಂಡಿತ ಹೇಳಿದ—ಅಷ್ಟು ಚೆನ್ನಾಗಿ ತಿಳಿಯುವುದಿಲ್ಲ. ಬಹಳ ಮಟ್ಟಿಗೆ ಜಂಗಮ ಎಂದ.’

‘ಜಂಗಮ ‘ಅಂದರೇನು?’ ಎಂದ ಒಬ್ಬ ಶಿಷ್ಯ.

‘ಜಂಗಮ ಅಂದರೆ ಹಾವು ಇತ್ಯಾದಿಗಳ ವಿಷ. ಸ್ಥಾವರ ಅಂದರೆ ಅಲುಗಾಡದೆ ಒಂದೇ ಕಡೆ ಇರುವ ಗಿಡ ಮುಂತಾದವುಗಳ ವಿಷ. ದೊರೆಯು ಬಹಳ ಒಳ್ಳೆಯವನಾಗಿದ್ದರಿಂದ ಅವನಿಗೆ ಯಾರು ತಾನೆ ವಿಷಪ್ರಯೋಗ ಮಾಡಿ-ಯಾರು ಎಂಬೋ ಭಾವನೆಯಿಂದ ಆ ಪಂಡಿತ ಜಂಗಮ ಅಂದ. ಆಮೇಲೆ ಮುದಿ ದೊರೆ ಹಾಗೇ ಯೋಚನೆಮಾಡಿ ರಾಜ್ಯ ಅನಾಯಕವಾಗಬಾರದೆಂದು ಮನೆಯಲ್ಲಿ ಮಗುವನ್ನು ನೋಡಿಕೊಳ್ಳುತ್ತಿದ್ದ ಆಪ್ತ ಸೇವಕನನ್ನು ಕೇಳಿದ. ಆ ಸೇವಕ ಮಹಾ ಯೋಗಿ. ಅವನಿಗೆ ಈ ಪ್ರಪಂಚದ ವಿಚಾರವೇ ಬೇಕಾಗಿರಲಿಲ್ಲ.’

‘ಅಂತಹವರೂ ಇದ್ದಾರೇನು?’

'ಇಲ್ಲದೆ ಏನಪ್ಪ! ನಮ್ಮ ನಮ್ಮ ಮನಸ್ಸಿನ ಪ್ರಕಾರ ನಮಗೆ ಅವರು ಗೋಚರವಾಗುತ್ತಾರೆ. ಇದ್ದಾರೆ ಎಂದರೆ ಇದ್ದಾರೆ; ಇಲ್ಲ ಎಂದರೆ ಇಲ್ಲ! ಇದ್ದಾರೆ; ನಮ್ಮ ಪುಣ್ಯ ಚೆನ್ನಾಗಿದ್ದರೆ ನಮಗೆ ಕಾಣುತ್ತಾರೆ.'

'ಆಮೇಲೆ?'

'ಆ ಮುದಿರಾಜ ಬರೆದಿಟ್ಟ ಆ ದಿನವೇ, ಮಾಧವ ಒಡೆಯನಿಗೆ ವಯಸ್ಸು ಬರುವುದರೊಳಗಾಗಿ ತಾನು ಮಡಿದರೆ ಈ ರಾಜ್ಯಕ್ಕೆ ರಾಜಾ ರಾಯನೇ ದೊರೆಯಾಗಿರತಕ್ಕದ್ದು, ಅವನ ಆಯುಸ್ಸು ತೀರುವ ವರೆಗೆ ಎಂದು ಇದರಿಂದ ರಾಜಾರಾಯನಿಗೆ ದುರ್ಬುದ್ಧಿ ಹುಟ್ಟಿತು. ಮಾಧವ ಒಡೆಯನ ಆರನೆಯ ಹುಟ್ಟಿದ ಹಬ್ಬದ ದಿನ ಮುದಿರಾಜನಿಗೆ ವಿಷಪ್ರಯೋಗಮಾಡಿದ. ರಾಜ್ಯವನ್ನು ತಾನುಳಿಸಿಕೊಂಡ!'

'ಜನರಿಗೆ ಗೊತ್ತಾಗಲಿಲ್ಲವೆ?'

'ಇಲ್ಲ. ವೈದ್ಯರಿಗೆ ಕೂಡ ಸಿಕ್ಕದೆ ಅಂದರೆ ಗೊತ್ತಾಗದೆ ಇರುವ ವಿಷ ಗಳಿವೆ. ಒಂದು ತರವಾದ 'ಜೇಡ'ವಿದೆ. ಅದು ಕಚ್ಚಿದರೆ ವಿಷವೇರಿ ಮನುಷ್ಯ ಸಾಯುತ್ತಾನೆ. ಅದು ಆಫ್ರಿಕಾ ದೇಶದಲ್ಲಿದೆ ಎಂದು ಕೇಳಿದ್ದೇನೆ. ಆ ಜೇಡದ ವಿಷವನ್ನು ಪ್ರಯೋಗಮಾಡಿದನೆಂದು ಕೆಲವರಿಗೆ ಮಟ್ಟಿಗೆ ಗೊತ್ತು. ಆ ದಿನವೇ ತನಗೂ ಇದೇ ಸ್ಥಿತಿ ಬರಬಹುದೆಂದು ಆಪ್ತಸೇವಕನಾದ ಶಿವಪ್ಪ ನಾಯಕ, ಈ ಊರನ್ನು ಬಿಟ್ಟು ಹೊರಟುಹೋದ.'

'ಶಿವಪ್ಪನಾಯಕ—ಎಂದರೆ ನಮ್ಮ ಮಂತ್ರಿಗಳ ಭಾವಮೈದುನ!' ಎಂದ ಶಿಷ್ಯ.

'ಹೌದು. ಚಿತ್ರಾಬಾಯಿಯ ಅಣ್ಣ. ಅವನು ಹೊರಟುಹೋದ ಮೇಲೆ ಲೀಲಾಬಾಯಿ ಹುಟ್ಟಿದ್ದು, ಬಡತನ ಬಂದಿದ್ದು. ಆ ಬಡತನವನ್ನು ತಡೆಯು ಲಾರದೆ, ಮದುವೆಮಾಡಿ ಕೊಡುವುದಕ್ಕೆ ಯಾರಿಗೂ ಸಿಗದೆ, ಚಿತ್ರಾಬಾಯಿ ಯನ್ನು ಮಂತ್ರಿಗಳಿಗೆ ಎರಡನೆಯ ಹೆಂಡತಿಯನ್ನಾಗಿ ಮಾಡಿ, ಅವರ ತಂದೆ ಕೊರಗಿ ಪ್ರಾಣವನ್ನು ಬಿಟ್ಟಿದ್ದು.'

'ಅಂದರೆ ಅವರು ಕೊರಗುವುದಕ್ಕೂ ಈ ರಾಜನೇ ಕಾರಣ ಎನ್ನಿ!' ಎಂದ ಶಿಷ್ಯ.

'ಹೌದಪ್ಪ, ಒಂದು ಕೆಟ್ಟ ಹುಳುವಿದ್ದರೆ ಅದು ಊರೆಲ್ಲ ವ್ಯಾಪಿಸುತ್ತೆ. ಅದಕ್ಕಾಗಿಯೆ ನಮ್ಮವರು ಆ ಕೆಟ್ಟ ಹುಳುವಿಗೆ ಕೂಡ ಒಂದು ನಾಯಕತ್ವ ವನ್ನು ಕಲ್ಪಿಸಿದ್ದಾರೆ. ಅವನನ್ನು ಸಾಮಾನ್ಯವಾಗಿ ಪ್ರತಿನಾಯಕನನ್ನಾಗಿ ಮಾಡುತ್ತಾರೆ. ಅವನಿಗೆ ಅಹಂಕಾರ, ರೌದ್ರ ಚಾಂಚಲ್ಯಗಳು, ಆತ್ಮಶ್ಲಾಘನೆ, ಇವೇ ಮುಖ್ಯವಾದವು.'

'ಅಂದರೆ ಸದ್ಯದಲ್ಲಿ ನಮ್ಮ ರಾಜರು ಧೀರೋದ್ಧತರು ಎನ್ನಿ!'

'ಅದಕ್ಕೆ ಅನುಮಾನವೇನ? ನೀವು ಯಾವ ರೀತಿಯಿಂದ ನೋಡಿ ದರೂ ಅದಕ್ಕೆ ಅನುಮಾನವಿಲ್ಲ. ಪುರಾಣಗಳಲ್ಲಿ ದುರ್ಯೋಧನ, ರಾವಣ ಇವರಿದ್ದರಂತೆ!'

## ೧೧

'ಇದೊಂದು ಕನಸು! ಎಂದಾದರೂ ಆದೀತೇ!' ಎಂದಳು ಲೀಲಾಬಾಯಿ.

ನಗುತ್ತ ಅವಳ ಅಕ್ಕ ಚಿತ್ರಾಬಾಯಿ ಹೇಳಿದಳು: 'ಕನಸಿನಲ್ಲಿ ಕಾಣದಿದ್ದು ದನ್ನೇ ನಾವು ಈಗ ನೋಡುತ್ತಿದ್ದೇವೆ. ಎಂದೆಂದಿಗೂ ಯಾರೂ ಊಹಿಸ ಲಾರದ ಕೆಲಸಗಳು ಈಗ ಆಗುತ್ತಾಯಿವೆ. ಹೀಗಿರುವಾಗ ಕನಸುಗಳು ನಿಜವಾಗಿ ನಡೆಯುವುದು ಏನಾಶ್ಚರ್ಯ, ಲೀಲಾ?'

'ನನಗೂ ಒಂದೊಂದು ಸಲ ಹಾಗೇ ತೋರುತ್ತೆ. ಅದೇ ಆಗಬೇಕೆಂದು ನಾನು ಪ್ರತಿ ದಿನವೂ ಭಗವಂತನನ್ನು ಪ್ರಾರ್ಥಿಸುತ್ತಿದ್ದೇನೆ. ನನಗೆ ಆ ಭಾಗ್ಯ ಸಿಗಬೇಕೆಂದಲ್ಲ – ನನ್ನ ಒಡೆಯರಿಗೆ ಅವರ ರಾಜ್ಯ ಅವರಿಗೆ ಸಿಗ- ಬೇಕೆಂದು!'

'ಸಿಗುತ್ತೆ. ಎಲ್ಲಾ ಆ ಭಗವಂತನ ಇಚ್ಛೆ!'

'ರಾಜ್ಯದಲ್ಲಿ ಗಲಭೆಗಳಿಲ್ಲದೆ ಸಿಗುವ ರೀತಿ ಹೇಗೆ? ಕತ್ತಿಯನ್ನು ಹಿಡಿದು ಹೋರಾಡುವವರು ಕತ್ತಿಯಿಂದಲೆ ಸಾಯುತ್ತಾರೆ. ರಾಜ್ಯದಲ್ಲೇ ಎಂಡು ಸಂಗಡಗಳನ್ನು ಮಾಡಿ ಯುದ್ಧವನ್ನು ಮಾಡಿ ಗೆಲ್ಲುವುದು ಅವರಿಗೂ ಇಷ್ಟವಿಲ್ಲ.'

'ನ್ಯಾಯ; ಇದರಿಂದ ಪ್ರಜೆಗಳ ನಾಶ, ಅಷ್ಟೆ.'

'ಅವರ ಪೂಜ್ಯ ತಾತಂದಿರು ದೇಶವನ್ನು ಎಷ್ಟೋ ಉನ್ನತ ಸ್ಥಿತಿಗೆ ತಂದು ವ್ಯಾಪಾರವನ್ನು ಹೆಚ್ಚಿಸಿ, ಪ್ರಜೆಗಳಿಗೆ ಬೇಕಾದ ಸಹಾಯವನ್ನು ಕೊಟ್ಟು ರಾಮರಾಜ್ಯವನ್ನೇ ಕಟ್ಟಬೇಕೆಂದಿದ್ದರಂತೆ! ಇಂತಹ ನಮ್ಮ ರಾಜ್ಯವು ಇಂಥವನ ಕೈಗೆ ಬಿತ್ತಲ್ಲ!'

'ನೀನಿನ್ನೂ ಹುಡುಗಿ! ನಿನಗೇಕೆ ಈ ವ್ಯಥೆ?'

'ಚೆನ್ನಾಯಿತು. ನಾನು ಹುಡುಗಿ! ಆದರೆ ನಾಳೆ ನಾನೇ ಒಡೆಯರ ಜೀವ. ಆ ಕನಸು ನಿಜವಾದರೆ ನನ್ನ ವಯಸ್ಸು ಎಷ್ಟಾಗುತ್ತೆ!'

'ಹುಚ್ಚಿ! ನಮ್ಮವರನ್ನು ಕೇಳಿದರೆ ಗೊತ್ತಾಗುತ್ತೆ! ಹೆಂಗಸರಿಗ್ಯಾಕೆ ಈ ಕಾರಬಾರು ಎಂತಾರೆ.'

'ಹೌದು, ಸಂಯುಕ್ತ ಭಾರತದ ವಿಚಾರ ಹೆಂಗಸರಿಗೆ ಬೇಕಾಗಿಲ್ಲ. ಬರೀ ಗಂಡಸರೇ ಕಟ್ಟುತ್ತಾರೇನು ಒಂದು ಜನಾಂಗವನ್ನು? ಹೆಂಗಸರ ಕೈಲಿ ಆಗು ವಂತಹ ತ್ಯಾಗ ಗಂಡಸರ ಕೈಲಿ ಒಂದೊಂದು ಸಲ ಸಾಧ್ಯವಿಲ್ಲ!'

'ಎಲೆ, ಎಲ್ಲಿ ಕಲಿತೆಯೆ ಈ ಪಾಂಡಿತ್ಯ!'

'ಪಾಂಡಿತ್ಯವಲ್ಲ, ನನಗೆ ತೋರುವುದನ್ನು ನಾನು ಹೇಳುತ್ತಿದ್ದೇನೆ. ಈಗ ನಮ್ಮ ತಾಯಿಯನ್ನು ನೋಡು. ಆಕೆ ಗಂಡನೊಡನೆ ಏತಕ್ಕೆ ಸಹಗಮನ ಮಾಡಲಿಲ್ಲ? ಸಹಗಮನ ಮಾಡುವುದು ತ್ಯಾಗವಲ್ಲ, ಒಂದೇ ಸಲ ತನ್ನ ಜೀವ ವನ್ನು ಬಿಟ್ಟುಬಿಡುವುದು. ಅದರಿಂದ ಯಾರಿಗೆ ಉಪಯೋಗ? ಸತ್ತವರಿಗಾಗಿ ನಾವು ಜೀವ ಕೊಟ್ಟರೆ ಅವರಿಗೆ ಬರುವುದೇನು? ನಮ್ಮ ಕಷ್ಟವನ್ನು ಕೊನೆ- ಗಾಣಿಸುವುದಕ್ಕಾಗಿ ನಾವು ಅವರೊಡನೆ ಸಾಯಬಹುದು. ಆದರೆ ಆಮೇಲೆ ಬದುಕಿ, ತನ್ನ ಜೀವವನ್ನು ಪರರ, ತನ್ನವರ ಹಿತಕ್ಕಾಗಿ ಸವೆಸುವುದು ಇದೆ ಯಲ್ಲಾ, ಅದು ಬಹಳ ಕಷ್ಟ. ಇದ್ದೂ ಸತ್ತಂತೆ ಇರುವುದಿದೆಯಲ್ಲಾ ಅದು ನಿಜವಾದ ತ್ಯಾಗ.'

'ನಮ್ಮ ಜನ ಈ ತ್ಯಾಗವನ್ನು ಚೆನ್ನಾಗಿ ಕಲಿತ ಹಾಗೆ ಕಾಣುತ್ತೆ. ಇದ್ದೂ ಸತ್ತಂತೆ ಇರುತಾರೆ! ನೀವೇನು ಮಾಡಿದರೂ ಅವರು ಮಾತನಾಡು- ವುದೇ ಇಲ್ಲ.'

'ಬೇಗ ಮಾತಾಡುವವರನ್ನು ಬೇಗನೆ ತೃಪ್ತಿಗೊಳಿಸಬಹುದು. ಆದರೆ ನಿಧಾನವಾಗಿ ಯೋಚನೆಮಾಡಿ ಮಾತಾಡುವವರನ್ನು ಸೋಲಿಸುವುದು ಕಷ್ಟ. ನಮ್ಮ ಜನಕ್ಕೆ ಬಲವಿಲ್ಲವೆಂದಲ್ಲ. ಅವರು ಬಹಳ ನಿಧಾನಸ್ಥರು. ಸಾಮಾನ್ಯ ವಾಗಿ ಸಿಟ್ಟೇಳುವುದಿಲ್ಲ. ಆದರೆ ಒಮ್ಮೆ ಎದ್ದರೆ, ಮಿಕ್ಕವರ ಗತಿ ಮುಗಿದ ಹಾಗೇ.'

'ಮತವೈಷಮ್ಯಗಳಿಲ್ಲದೆ ಜಾತಿಮತ್ಸರಗಳನ್ನು ಬಿಟ್ಟು ಎಲ್ಲರೂ ಒಟ್ಟು-ಗೂಡಿ, ಅಖಿಲ ಭಾರತಕ್ಕೆ ಒಂದು ಕನ್ನಡಿಯಂತೆ ಇರಬೇಕೆಂದು ಕಟ್ಟಿದ ರಾಜ್ಯ ಈ ಸ್ಥಿತಿಗೆ ಬಂತಲ್ಲ!'

'ಹೌದು. ಈ ರಾಜ್ಯ ವೀರರಿಗೆ ಸೇರಿದ್ದು. ಯಾವ ರಾಜ್ಯವೂ ಅಷ್ಟೆ. ಸಾತ್ವಿಕತನದಿಂದ ಹೋರಾಡುವವರೂ ವೀರರೇ. ಕತ್ತಿಯಿಂದ ಹೋರಾಡು ವುದು ಸುಲಭ. ಒಂದೇಟಿಗೇ ಕೆಲಸ ಮುಗಿದುಹೋಗುತ್ತೆ. ಆದರೆ ಆತ್ಮ ಶಕ್ತಿಯಿಂದ ಹೋರಾಡುವುದು ಬಹಳ ಕಷ್ಟ. ಗೆದ್ದರೆ ತನ್ನ ಶತ್ರುವೇ ತನಗೆ ಸೇವಕನಾಗುತ್ತಾನೆ.'

'ಇದೆಲ್ಲ ಬರೀ ಮಾತು. ನಿಜವಾಗಿ ಅತ್ಮಶಕ್ತಿಯಿಂದ ಹೋರಾಡುವ ಮನುಷ್ಯರಿದ್ದಾರೆಯೆ?'

'ಹಿಂದೆ ಇದ್ದರು, ಈಗ ಇದ್ದಾರೆ, ಮುಂದೆ ಇರುತ್ತಾರೆ. ಆಗಾಗ ಜನರಲ್ಲಿ ವಿಷವು ಹುಟ್ಟುವುದು, ಇಂತಹವರನ್ನು ಈ ಭಾರತಭೂಮಿಗೆ ತರು-ವುದಕ್ಕಾಗಿಯೇ. ಅಹಲ್ಯಾಬಾಯಿ ಹುಟ್ಟಲಿಲ್ಲವೆ?'

'ಒಂದು ಅಹಲ್ಯಾಬಾಯಿಯಿಂದ ಎಲ್ಲಾ ಆಗುತ್ತದೆಯೆ?'

'ಹಾಗಲ್ಲ. ಪ್ರತಿ ಸ್ತ್ರೀಯೂ ಈ ಭಾರತಭೂಮಿಯಲ್ಲಿ ಅಹಲ್ಯಾ ಬಾಯಿಯೆ. ತನ್ನ ಮಕ್ಕಳನ್ನು ಸಾಕುವ ವಿಚಾರದಲ್ಲಿಯೂ ತನ್ನ ಧರ್ಮ ವನ್ನು ಪಾಲಿಸುವುದರಲ್ಲಿಯೂ ನಮ್ಮ ಸ್ತ್ರೀಯರು ಪ್ರಪಂಚದಲ್ಲೆಲ್ಲಾ ಉತ್ತಮ ರೆಂದರೆ ಅತಿಶಯವಲ್ಲ. ದೇವರು ನಿಜವಾಗಿಯೂ ಸ್ತ್ರೀಪರನಾದವನಾಗಿದ್ದರೆ ಭಾರತದೇಶಕ್ಕೆ ಇಂತಹ ತೊಂದರೆ ತಂದೊಡ್ಡುತ್ತಿರಲಿಲ್ಲ ನಮ್ಮಲ್ಲೇ ಹುಟ್ಟಿ ನಮ್ಮಲ್ಲೇ ಬೆಳೆದು ನಮಗೆ ಯಾರೂ ವಿಷಪ್ರಾಯರಾಗುತ್ತಿದ್ದಿಲ್ಲ'

'ಹೌದು, ಹಾಗಾದರೆ ನಿನ್ನ ಅಭಿಪ್ರಾಯವೇನು ಈಗಿನ ಸಂದರ್ಭದಲ್ಲಿ?'

'ನನ್ನ ಅಭಿಪ್ರಾಯವೇನೂ ಇಲ್ಲ. ಮಾಧವ ಒಡೆಯರ ಮಾತೇ ನನ್ನ ಮಾತು.'

ಚಿತ್ರಾಬಾಯಿಯ ಕೆಲಸ ಬಹಳ ಕಷ್ಟವಾಯಿತು. ತನ್ನ ಮೇಲೆ ಇಲ್ಲದ ದೋಷಾರೋಪಣೆ ಹುಟ್ಟಿದೆ ಎಂಬುವುದು ಅವಳಿಗೆ ತಿಳಿಯಿತು. ಇದರಿಂದ ಅವಳ ಮನಸ್ಸಿಗೆ ನೋವಾಗಲಿಲ್ಲ. ತಾನು ಮಾಡುವ ಕೆಲಸ ತಪ್ಪಲ್ಲ. ಜನರು ಆಡಿಕೊಂಡರೆ ತನಗೇನು!

ಆದರೆ ತನ್ನ ಗಂಡನ ವಿಚಾರದಲ್ಲಿ ಮನಸ್ಸು ಕಳವಳಿಸುತ್ತಿತ್ತು. ಗಂಡ ನಿಗೂ ತಿಳಿದಿದೆ. ಆತನು ತನ್ನನ್ನು ಯಾವ ರೀತಿಯಲ್ಲಿ ನೋಡುತ್ತಾನೋ, ಆದರಿಂದ ತನಗೆ ಈ ಮಂತ್ರಿಯ ಮನೆಯಲ್ಲಿ ಯಾವ ಯಾವ ಕಷ್ಟಗಳು ಬರು ತ್ತವೆಯೋ ಎಂಬೊಂದು ಯೋಚನೆ ಬಂತು. ತನಗಾಗಿ ಅಷ್ಟಲ್ಲದಿದ್ದರೂ ತನ್ನ ತಂಗಿ ತಾಯಿ ಇವರಿಬ್ಬರಿಗೂ ಇನ್ನೂ ಹೆಚ್ಚಾದ ಕಷ್ಟಗಳು ಒದಗ-ಬಹುದು. ಅವರು ಮನೆಯನ್ನು ಬಿಟ್ಟು ಹೋಗುವಂತಿರಲಿಲ್ಲ ಇದ್ದೊಬ್ಬ ಮಗ ಬೈರಾಗಿಯಾದ. ಬೇರೆ ಯಾರೂ ದಿಕ್ಕಿಲ್ಲ. ಇಂತಹ ಸಂದರ್ಭದಲ್ಲಿ ತಾಯಿಯು ತನ್ನ ಮಗಳಾದ ಲೀಲಾಬಾಯಿಗೋಸ್ಕರವಾಗಿ ಬದುಕಿದ್ದ ಹಾಗೆ ಇವಳಿಗೆ ತೋರಿತು.

ತನ್ನ ವಿಚಾರ ತನ್ನ ಗಂಡನಿಗೆ ತಿಳಿದ ಮೇಲೆ ನಿಜವಾದ ವಿಚಾರವನ್ನು ಹೇಳಬೇಕಾಗಿ ಬಂದೀತು; ಇಲ್ಲವೆ ಜನರಾಡುವುದೇ ನಿಜವೆಂದು ಆತನಿಗೆ ತಿಳಿಸ ಬೇಕಾಗಿ ಬಂದೀತು. ನಿಜವನ್ನು ಹೇಳುವುದಕ್ಕೆ ತನಗೆ ಅಧಿಕಾರವಿಲ್ಲ. ಮಾಧವ ಒಡೆಯರ ಅನುಮತಿಯಿಲ್ಲದೆ ತಾವು ಯಾರೂ ಆ ವಿಚಾರವನ್ನು ಹೇಳುವುದಿಲ್ಲವೆಂದು ಮಾತು ಕೊಟ್ಟಿದ್ದರು. ಕೊಟ್ಟ ಮಾತನ್ನು ತಪ್ಪುವುದು ಇನ್ನೂ ಭಾರತದ ಜನರು ಕಲಿತಿಲ್ಲ ಆದರಿಂದ ಅವರಿಗೆ ದುಃಖಪರಂಪರೆಗಳು ಹೆಚ್ಚೆಂದು ಅವರಿಗೆ ತಿಳಿದಿದ್ದಾಗ್ಯೂ ಯುರೋಪಿನ ಸಂಪರ್ಕದಿಂದ ಆ ಗುಣ ಇನ್ನೂ ಹೋಗಿಲ್ಲ.

## ೧೨

ಮನಸ್ಸು ಕದಲಿದಾಗಲೆಲ್ಲ ಚಿತ್ರಾಬಾಯಿ ತನ್ನಲ್ಲಿ ತಾನೇ ಸಭಾಪರ್ವ ವನ್ನು ಅಂದುಕೊಳ್ಳುವಳು. ಆದರಿಂದ ಅವಳಿಗೆ ಮನಸ್ಸು ಶಾಂತವಾಗು-ತ್ತಿತ್ತು. ಆದರಂತೆ ಆ ದಿನವೂ ಹೇಳತೊಡಗಿದಳು:

ಗತಿವಿಹೀನರಿಗಕಟ ನೀನೇ
ಗತಿಯೆಲ್ಲೈ ಗೋವಿಂದ ರಿಪು ಬಾ-
ಧಿತರನಾಥರಿಗಬಲರಿಗೆ ನೀ ಪರಮ ಬಂಧುವಲಾ ।
ಸತಿಪಶುದ್ವಿಜ ಬಾಧೆಯಲಿ ಜೀ-
ವಿತವ ತೊರೆವರು ಗರುವತನ ಹಿಂ-
ಗಿತು ಸುಯೋಧನ ಸಭೆಯೊಳೆಂದೊರ-
ಲಿದಳು ನಳಿನಾಕ್ಷಿ ॥

ಕಾಯ್ದೆಯ್ಯ ಕರುಣದಲಿ ದಿವಿಜರ
ತಾಯ ಪರಿಭವವನು ಪಯೋಧಿಯ
ಹಾಯಿದಮರಾರಿಗಳ ಖಂಡಿಸಿ ತಲೆಯ ಚೆಂಡಾಡಿ ।
ಕಾಯಿದೈ ಜಾನಕಿಯನೆನ್ನನು
ಕಾಯಬೇಹುದು ಹೆಣ್ಣ ಹರಿಬಕೆ
ನೋಯಬಲ್ಲರೆ ಕೆಲಬರೆಂದೊರಲಿದಳು
ಪಾಂಚಾಲಿ ॥

ವೇದವಧುಗಳ ಕಾಯ್ದೆಲಾ ತಮ-
ಬಾಧೆಯಲಿ ಖಳನಿಂದ ಧರಣಿಯ-
ಕೋದಧಿಯಲಿಕ್ಕಾಡಿದವೆ ದಾಡೆಯಲಿ
ದಾನವನ ॥

ಕೋದು ಹಾಕೀಭೂತ ಧಾತ್ರಿಯ-
ಕಾದೆಲಾ ಕಾರುಣ್ಯ ಸಿಂಧುವೆ
ಕಾದುಕೊಳ್ಳೈ ಕೃಷ್ಣಯೆಂದೊರಲಿದಳು
ತರಳಾಕ್ಷಿ ॥

ಸೊಕ್ಕಿದಂತಕದೂತರನು ಸದೆ-
ದೊಕ್ಕಲಿಕ್ಕಿಯಜಾಮಿಳನ ಹಿಂ-
ದಿಕ್ಕಿಕೊಂಡೆಯಲ್ಲೈ ದುರಾತ್ಮಕ್ಷತ್ರ-
ಬಂಧುಗಳು ।

ಸೊಕ್ಕಿದರು ಕೌರವರು ಖಳರಿಗೆ
ಸಿಕ್ಕಿದೆನು ನಿನಗಲ್ಲದಾರಿಗೆ
ಕಕ್ಕುಲತೆ ಬಡುವೆನು ಮುಕುಂದಯೆ
ನುತ್ತ ಹಲುಬಿದಳು ||

ಚರಣಭಜಕರ ಮಾನಹಾನಿಯ
ಹರಿಬವಾರದು ಕೃಷ್ಣನಾಮ
ಸ್ಮರಣೆ ಧನಿಕರಿಗುಂಟೆ ಫಲ್ಗುಣೆ ಘೋರಪಾತಕದ |

ಪರಮಭಕ್ತಕುಟುಂಬಕನು ನೀ-
ಕರುಣಿಯೊಲ್ಲದೊಡೀ ಕುಟುಂಬವ
ಪೊರೆವರಾರೈ ಕೃಷ್ಣಯೆಂದೊರಲಿದಳು ತರಳಾಕ್ಷಿ ||

ಮರೆದನಭ್ಯುದಯದಲಿ ನೀನೆಂ-
ದರಿವೆನಾಪತ್ತಿನಲಿ ಮನದಲಿ
ಮರುಕಿಸುವೆನುಬ್ಬಿನಲಿ ಕಳವಳಿಸುವೆನು
ಖೋಡಿಯಲಿ |

ಅರಿಯದಜ್ಞರ ಗುಣವ ದೋಷವ
ನರಸುವರೆ ನಿಮ್ಮಡಿಯ ಗುಣವನು
ಮರೆಯಲಾಗದೆ ಕೃಷ್ಣಯೆಂದೊರಲಿದಳು
ನಳಿನಾಕ್ಷಿ ||

## ೧೩

ಬೈರಾಗಿ ವೀರಸಿಂಹ ಇಬ್ಬರೂ ಬಹಳ ಆಲೋಚನೆ ಮಾಡುತ್ತ ಕುಳಿತಿದ್ದರು.

'ಇದರಿಂದ ನಮ್ಮ ಜನರಿಗೆ ಪ್ರಾಣಹಾನಿಯಾಗಬಾರದು.' ಎಂದ ವೀರಸಿಂಹ.

'ಅದೇ ನಮಗೆ ಈಗ ಬೇಕಾಗಿರುವುದು ಯಾರಿಗೂ ತೊಂದರೆಯಾಗದೆ ನಮ್ಮ ಕೆಲಸವಾಗಬೇಕು,' ಎಂದ ಬೈರಾಗಿ.

ಇಷ್ಟು ಹೊತ್ತಿಗೆ ಯಾರೋ ಬಂದ ಹಾಗಾಯ್ತು. ವೀರಸಿಂಹ ತಲೆ ಯೆತ್ತಿ ನೋಡಿದ. ದುರಧರನು ಓಡಿ ಬಂದ ಹಾಗೆ ತೋರಿತು.

'ಏನು ಸಮಾಚಾರ?' ಎಂದ ಬೈರಾಗಿ.

'ಕಾಯಣ್ಣನ್ನ ದಸ್ತಗಿರಿ ಮಾಡಿದ್ದಾರೆ,' ಎಂದ ದುರಧರ.

'ಏತಕ್ಕೆ?

'ಆ ವಿಚಾರ ನನಗೆ ತಿಳಿಯದು. ಅವನ ಜೊತೆಯಲ್ಲಿದ್ದ ೨೦ ಮಂದಿ ಯನ್ನೂ ದಸ್ತಗಿರಿಮಾಡಿ, ಈಗ ಜೈಲಿಗೆ ಕರೆದುಕೊಂಡು ಹೋದರು.'

'ಇಂಥಾ ತಪ್ಪಿಗೆ ಎಂದು ಹೇಳಲಿಲ್ಲವೆ?'

'ಇಲ್ಲ.'

'ರಾಜರ ಕಟ್ಟಲೆ ಇದ್ದ ಹಾಗೆ ತೋರುತ್ತೆ.'

'ಹೌದು '

'ಇನ್ನೇನು ವಿಶೇಷ?'

'ಸಂಗಯ್ಯನನ್ನು ಹುಡುಕಿಕೊಂಡು ನೀಲಪ್ಪನ ಮನೆಗೆ ಬಂದರು. ಅವನು ಊರಲ್ಲಿರಲಿಲ್ಲ. ಅದಕ್ಕೆ ನೀಲಪ್ಪನನ್ನೇ ದಸ್ತಗಿರಿ ಮಾಡಿದ್ದಾರೆ.'

'ಇದು ಬಹಳ ಸ್ವಾರಸ್ಯವಾಗಿದೆ.'

'ನೀಲಪ್ಪನನ್ನು ದಸ್ತಗಿರಿ ಮಾಡಿದರೆ ಸಂಗಯ್ಯ ಊರಿಗೆ ಬಂದುಬಿಡು ತ್ತಾನೆ ಅಂತ.'

'ಪಾಪ, ಮುದುಕನಿಗೆ ಹಾಗಾದರೆ ಜೈಲಿನಲ್ಲಿ ಕೂಡುವ ಗತಿ ಬಂತು!' ಎಂದ ವೀರಸಿಂಹ.

'ಅಯ್ಯೊ, ಅದೇನ್ರೀ ಈಗ ನಮ್ಮೂರಲ್ಲಿ ಜೈಲು ಅಂದರೆ ಅನ್ನಾ ಹಾಕೋ ಚತ್ರ ಆಗಿಬಿಟ್ಟದೆ. ಯಾರು ಬೇಕಾದರೂ ಜೈಲಿಗೆ ಹೋಗಲು ಸಿದ್ಧವಾಗಿ ದ್ದಾರೆ. ನಾನು ತಾನು ಎಂದು ಮುಂದೆ ಬರೋಹಾಗಿದೆ. ಯಾರ ಮನೆ

ಯಲ್ಲಿ ನೋಡಲಿ, ದೇವರನ್ನು ಪ್ರಾರ್ಥನೆ ಮಾಡುತ್ತಿದ್ದಾರೆ—ಅಪ್ಪ, ನನಗೆ ಜೈಲು ಸಿಕ್ಕೋ ಹಾಗೆ ಮಾಡು ಎಂತ.

'ಅದೇಕೆ, ಪರಮಾತ್ಮ ಹುಟ್ಟಿದ್ದೇ ಜೈಲಿನಲ್ಲಿ. ಜೈಲಿಗೆ ಹೋಗೋದೂ ಪರಮಾತ್ಮ ಹುಟ್ಟಿದ ಸ್ಥಳಕ್ಕೆ ಹೋಗೋದೂ ಎರಡೂ ಒಂದೇ!' ಎಂದ ಬೈರಾಗಿ.

'ನಂದಸಿಂಗರನ್ನೂ ಹಿಡಿದಿದ್ದಾರೆ.'

'ಏತಕ್ಕೆ?'

'ಅವರು ಮೊನ್ನೆಯ ದಿನ ಆ ಪಾರ್ಸಿ ವರ್ತಕನಿಗೆ ರೇಷ್ಮೆ ಮಾರಿದ ಎಂಬೋ ನೆಪದ ಮೇಲೆ.'

'ನಿಜ ಸ್ಥಿತಿ?'

'ಅವರು ಊರಲ್ಲೇ ಇರಲಿಲ್ಲ. ಅಲ್ಲ ಎಂಬೋದಕ್ಕೆ ಆ ವರ್ತಕನೂ ಇಲ್ಲಿಲ್ಲ. ಮುಖ್ಯವಾಗಿ ಅವರು ಮಾಧವ ಒಡೆಯರ ಕಡೆಯವರು ಎಂದು ರಾಜರ ಊಹೆ.'

'ನಿನಗದು ತಿಳದಿದ್ದು ಹೇಗೆ?' ಎಂದ ಬೈರಾಗಿ.

'ನಮ್ಮ ಜ್ವಾಲಾಪತಿ ಹೇಳಿದ.'

'ಜ್ವಾಲಾಪತಿ ಯಾರು?'

'ಈಗ ಸೈನ್ಯಾಧಿಪತಿಗಳಾಗಿರುವ ದುರ್ಗಸಿಂಗರ ಆಪ್ತ ಕಾರಕೂನ.'

'ಹಾಗಾದರೆ ಪಟ್ಟೆಯಲ್ಲಿ ಇನ್ನೂ ಜನರಿದ್ದ ಹಾಗೆ ತೋರುತ್ತೆ.'

'ಇದ್ದಾರೆ. ಎಲ್ಲಾ ಬಹಳ ಮಟ್ಟಿಗೆ ವರ್ತಕರೇ ಇದ್ದಾರೆ.'

'ಹೌದು. ವರ್ತಕರಿದ್ದರಲ್ಲವೆ ನಮಗೆ ಸಹಾಯ ಸಿಕ್ಕುವುದು. ಅಲ್ಲದೆ ಅವರನ್ನು ಹಿಡಿದು ಹಾಕಿದರೆ ರಾಜರಿಗೆ ಬೇಕಾದ ಹಾಗೆ ಹಣ ಸಿಗಬಹುದು. ನಮಗೆ ತೊಂದರೆ ಅವರಿಗೆ ಲಾಭ ಎಂದವರ ಅಭಿಪ್ರಾಯ.'

'ಇನ್ನೊಂದು ದೊಡ್ಡ ವಿಚಾರವಿದೆ.'

'ಏನದು?'

'ನಮ್ಮ ಮಂತ್ರಿಗಳ ಅತ್ತೆಯವರಿಗೆ ತೊಂದರೆ ಬರುವ ಹಾಗೆ ಕಾಣುತ್ತೆ.'

'ಹೇಗೆ?'

'ಚಿತ್ರಾಬಾಯಿಯ ತಂಗಿ ಒಬ್ಬಾಕೆ ಇದ್ದಾಳೆ. ಆಕೆಯನ್ನು ತನಗೆ ಮದುವೆ ಮಾಡಿಕೊಡಬೇಕೆಂದು ದೊರೆಗಳು ಮಂತ್ರಿಯನ್ನು ಕೇಳಿದರಂತೆ. ಮಂತ್ರಿ, ಅದಕ್ಕೆ ತನ್ನ ಅತ್ತೆಯನ್ನೊಪ್ಪಿಸುತ್ತೇನೆಂದು ಹೇಳಿದ್ದಾನಂತೆ.'

'ಇದೇನು ವಿಪರೀತ! ಎಲ್ಲಿಗೆಲ್ಲಿ ಸಂಬಂಧ! ಆ ಹುಡುಗಿ ಇನ್ನೂ ಬಹಳ ಸಣ್ಣವಳಲ್ಲವೆ?'

'ಆದರೇನು, ನಮ್ಮ ಮಂತ್ರಿಗಳೇ ಮಾಡಿಕೊಂಡಿಲ್ಲವೆ?'

'ಹೀಗೆ ರಾಜರು ಆಕೆಯನ್ನು ಬಯಸಲು ಕಾರಣವೇನಿರಬಹುದು?'

'ನಾನು ಕೇಳಿದ್ದು ಹೇಳುತ್ತಿದ್ದೇನೆ. ಮೊನ್ನೆ ಬಂದಿದ್ದನಲ್ಲ ಆ ಪಂಡಿತ.'

'ಹೌದು, ನೇಮಿಚಂದ್ರಪಂಡಿತ.'

'ಆತ ಹುಡುಗಿಯ ಕೈನೋಡಿ, ಈ ಹುಡುಗಿಯನ್ನು ಮದುವೆಯಾಗುವವನು ಚಕ್ರವರ್ತಿಯಾಗುತ್ತಾನೆ ಎಂದು ಹೇಳಿಬಿಟ್ಟನಂತೆ.'

'ಸರಿ.'

'ಇದು ರಾಜರ ಕಿವಿಗೆ ಬಿದ್ದು ಆ ಪಂಡಿತನನ್ನು ಕರೆಸಿ ಕೇಳಿದರಂತೆ. ಅವನು ಅದು ನಿಜವೆಂದು ಹೇಳಿದನಂತೆ. ಯಾರೋ ಮದುವೆ ಮಾಡಿಕೊಂಡು ಚಕ್ರವರ್ತಿಯಾಗುವ ಬದಲು ತಾನೇ ಅವಳನ್ನು ಮದುವೆಯಾದರೆ ಒಳ್ಳೆಯದೆಂದು ಆ ರಾಜರು ಮಂತ್ರಿಯನ್ನು ಕೇಳಿದರಂತೆ.'

'ಈ ಕತೆಯೇನೋ ಚೆನ್ನಾಗಿದೆ.'

'ನಿಜ ಸ್ವಾಮಿ, ಸುಳ್ಳಲ್ಲ.'

'ಹಾಗಾದರೆ ಇದು ಆ ಮಂತ್ರಿ ಹಿರಣ್ಯಯ್ಯನ ಕೈವಾಡವೆ ಇರಬೇಕು.'

'ಇದರಲ್ಲೇನಿದೆ?' ಎಂದ ವೀರಸಿಂಹ.

'ಇದರಲ್ಲಿ ಮಹತ್ತರವಾದ ವಿಚಾರವಿದೆ. ತನ್ನ ಹೆಂಡತಿಯ ತಂಗಿಯನ್ನು ದೊರೆ ಮದುವೆ ಮಾಡಿಕೊಂಡರೆ ಬರುತ್ತ ಬರುತ್ತ ಹೆಂಡತಿಯ ತಂಗೀದೇ ಆಗುತ್ತೆ ರಾಜ್ಯಾಡಳಿತ. ಎಂದ ಮೇಲೆ ತನ್ನ ಪದವಿ ಸ್ಥಿರವಾಗುವುದಲ್ಲದೆ, ಎಲ್ಲೆಲ್ಲೂ ತನ್ನ ಮಾತೇ ನಡೆಯುತ್ತೆ.'

'ಇದ್ದರೂ ಇರಬಹುದು.' ಎಂದ ವೀರಸಿಂಹ.

'ಇದೆಂದಿಗೂ ಆಗಲಾರದು.' ಎಂದ ಬೈರಾಗಿ.

'ಏತಕ್ಕೆ?' ಎಂದ ವೀರಸಿಂಹ.

'ಮದುವೆಮಾಡಿಕೊಳ್ಳುವವಳು ಒಪ್ಪಬೇಕಲ್ಲ!' ಎಂದ ಬೈರಾಗಿ.

'ದೊರೆಯನ್ನು ಒಪ್ಪದೆ ಇರುವವರೂ ಇದ್ದಾರೆಯೆ?' ಎಂದ ವೀರಸಿಂಹ.

'ಇದ್ದಾರೆ. ಈ ಹುಡುಗಿ ದೊರೆಯನ್ನು ಮದುವೆಯಾಗಲು ಒಪ್ಪುವು ದಿಲ್ಲ. ಅದಕ್ಕೆ ಸಾಕಾದಷ್ಟು ಕಾರಣಗಳಿವೆ.' ಎಂದ ಬೈರಾಗಿ.

'ಮುನಷಿಸವಾರರವರನ್ನು ಹಿಡಿದುಕೊಂಡು ಹೋಗಿದ್ದಾರೆ' ಎಂದ ದುರಧರ.

'ಅವರ ಮೇಲೇನು ತಪ್ಪು?'

'ಮೊನ್ನೆ ಅಧಿಕಾರಿಗಳು ವಿಚಾರಣೆ ಮಾಡಿದಾಗ ರುಸ್ತುಮನ ಮೇಲೆ ಸುಳ್ಳು ಸಾಕ್ಷಿ ಹೇಳಬೇಕೆಂದು ಅವರನ್ನು ಬಲವಂತ ಮಾಡಿದರಂತೆ. ಅವರು ಅದಕ್ಕೆ ಒಪ್ಪಲಿಲ್ಲ.'

'ಮುನಷಿಗಳು ಎಲ್ಲಾದರೂ ಒಪ್ಪುವರೆ!'

'ಅದಕ್ಕಾಗಿ ಅವರನ್ನು ಹಿಡಿದಿದ್ದಾರೆ.'

'ಈ ಅಧಿಕಾರಿಗಳಿಗಾದರೂ ಬುದ್ಧಿಯಿಲ್ಲವೆ?'

'ಅಧಿಕಾರಿಗಳಿಗೇನು? ರಾವಣ ಬಂದಾಗ ರಾವಣನಂತೆ—ರಾಮ ಬಂದಾಗ ರಾಮನಂತೆ.'

'ಅಂದರೆ ಎಲ್ಲದಕ್ಕಿಂತ ತಮ್ಮ ಹೊಟ್ಟೆಗೆ ಹಾಕಿಕೊಳ್ಳುವುದೇ ಹೆಚ್ಚು!'

'ಅಲ್ಲ, ಅದು ರಾಜನಲ್ಲಿರುವ ಗೌರವ!' ಎಂದ ವೀರಸಿಂಹ.

'ನಾನಿಲ್ಲಿಗೆ ಬರುವಾಗ ಹೇಳುತ್ತಿದ್ದರು. ಹಳ್ಳಿಯಿಂದ ಹಾಲು-ಮೊಸ ರನ್ನು ತರುತ್ತಿದ್ದ ಕೆಲವು ಹೆಂಗಸರನ್ನು ಅಧಿಕಾರಿಗಳು ಹಿಡಿದು ಅವರಿಗೆ ಅವ-ಮಾನ ಮಾಡಿ ಬಂದೀಖಾನೆಗೆ ಕರೆದುಕೊಂಡು ಹೋದರೆಂದು.'

'ಅವರು ಮಾಡಿದ ತಪ್ಪೇನು?'

'ನೊನ್ನೆ ತಿಲೋತ್ತಮೆಯನ್ನು ರಾಜರು ಕರೆಸಿದರು ಎಂದು ಒಬ್ಬಳೆಂದ ಳಂತೆ. ಅದಕ್ಕೆ ಮತ್ತೊಬ್ಬಳು, ಸರಿ ಸರಿ, ಎಂಥಾ ರಾಜ ಅವನು—ಸೀರೆ ಉಟ್ಟುಕೊಳ್ಳೋ ಗಂಡಸಿಗೆ ಮರ್ಯಾದೆ ಕೊಡೋನು! ಎಂದಳಂತೆ. ಅದಕ್ಕೆ ಗುಂಪನ್ನೆಲ್ಲಾ ಹಿಡಿದರಂತೆ.'

'ಯಾರು ಏನು ಮಾತಾಡಿಕೊಂಡರೂ ಹಿಡಿಯೋದೇ?'

'ಅದೇ ಈಗಿನ ಆಜ್ಞೆ ರಾಜರದು—ಎಲ್ಲಿ ಯಾರು ತಮ್ಮ ವಿಚಾರ ಏನೆಂದುಕೊಂಡರೂ ಅವರನ್ನು ಹಿಡಿದು ಜೈಲಿಗೆ ಹಾಕಬೇಕೆಂದು.'

'ಇದು ಅಧಿಕಾರಿಗಳಿಗೆ ಬಹಳ ಅನುಕೂಲ!'

'ಹೌದು. ಹಾಗೇ ಕಾಣುತ್ತೆ! ಮೊನ್ನೆಯ ದಿನ ಕೆಲವು ವರ್ತಕರನ್ನು ಐವತ್ತು ಸಾವಿರ ಹಣ ಕೂಡಿಸಿಕೊಡುವ ಹಾಗೆ ಕೆಲವು ಅಧಿಕಾರಿಗಳು ಕೇಳಿದ ರಂತೆ!'

'ಅಂದರೆ, ಹಾಗೆ ಹಣ ಕೊಡದೆ ಇದ್ದರೆ, ಅವರ ಮೇಲೆ ಏನಾದರೂ ತಪ್ಪನ್ನು ಹೊರಿಸಿ ರಾಜರ ಮುಂದೆ ನಿಲ್ಲಿಸುತ್ತೇವೆ ಎಂದು ಹೆದರಿಸಿರಬೇಕು.'

'ಅದೇ ಮತ್ತೇನು! ರಾಜನೇ ಇಂತಹ ವಿಚಾರಗಳಲ್ಲಿ ಕೈಹಾಕಿದ ಕಾಲಕ್ಕೆ ಅಧಿಕಾರಿಗಳನ್ನು ಕೇಳಬೇಕೆ!'

'ಊರಿನಲ್ಲಿ ನಮ್ಮ ಜನ ಹೇಗಿದ್ದಾರೆ?'

'ಅದೇ ತೊಂದರೆ ಬಂದಿರುವುದು. ಎಲ್ಲರಿಗೂ ಈ ರಾಜರ ಕಾಟ ಸಾಕಾಗಿದೆ. ಆದರೆ ತಮ್ಮ ಮಾತಿನ ಮೇಲೆ ಎಲ್ಲರೂ ಸುಮ್ಮನಿದ್ದಾರೆ. ಅಧಿ ಕಾರಿಗಳಂತೂ ಸಾಮಾನ್ಯ ಜನರನ್ನು ಸುಲಿದು ತಿನ್ನುತ್ತಿದ್ದಾರೆ. ಘಟಿಂಗ ರಾದ ಅಧಿಕಾರಿಗಳಿಗಂತೂ ಸ್ವರ್ಗವೇ ಅವರ ಕೈವಶವಾಗಿದೆ. ಊರಿನಲ್ಲಿರುವ ಸ್ತ್ರೀಯರೆಲ್ಲಾ ಅವರ ಪಾಲಿಗೆ ರಂಭಾದಿ ಅಪ್ಸರೆಯರಾಗಿ ಬಿಟ್ಟಿದ್ದಾರೆ. ಇಷ್ಟ ರಲ್ಲೇ ಕೆಲವು ಅಧಿಕಾರಿಗಳನ್ನು ಅವರ ಕಚೇರಿಗಳಲ್ಲೆ ಜನರು ಸುಟ್ಟುಬಿಡುವ ಹಾಗೆ ನನಗೆ ತೋರುತ್ತಿದೆ.'

'ಈ ಕೆಲಸ ಆಗಬಾರದು. ನಾವು ನಮ್ಮವರಿಗೆ ಬುದ್ಧಿ ಹೇಳಬೇಕು. ನಮ್ಮ ಕಾರ್ಯವನ್ನು ಕೇವಲ ಸಾತ್ವಿಕವೃತ್ತಿಯಿಂದ ಸಾಗಿಸಬೇಕಾಗಲಿ ಇಂತಹ

ಕೆಲಸವನ್ನು ಮಾಡಿ ಸಾಧಿಸಲು ಪ್ರಯತ್ನಪಡಬಾರದು. ನಾವು ಮಾಡುವ ಕೆಲಸವನ್ನು ನಿರ್ಮಲವಾದ ಹೃದಯದಿಂದ ಮಾಡೋಣ, ಅದರ ಪರಿಣಾಮ ವನ್ನು ದೇವರ ಕೃಪೆಗೆ ಬಿಡೋಣ.'

'ಬಿಡದಿದ್ದರೂ, ಆದಾಗದೇ ದೇವರ ಕೃಪೆಯಿಂದ ಎಲ್ಲಾ ಆಗಬೇಕಾದ್ದೇ' ಎಂದ ವೀರಸಿಂಹ.

## ೧೪

ಸುಮಾರು ಒಂಬತ್ತುಗಂಟೆಯ ಸಮಯ. ಆ ದಿನ ಬಿಸಿಲು ಹೆಚ್ಚಾ-ಗಿರಲಿಲ್ಲ. ಅಲ್ಲಲ್ಲಿ ಜನ ತಂಡತಂಡವಾಗಿ ಕುಳಿತಿದ್ದರು. ದೊಡ್ಡ ದೊಡ್ಡ ಮರಗಳ ಕೆಳಗೆ ಎರಡು ಮೂರು ಅಂಗಡಿಗಳಿದ್ದವು. ಅವುಗಳಲ್ಲಿ ತೆಂಗಿನ ಕಾಯಿ, ಕರ್ಪೂರ, ಊದಿನಕಡ್ಡಿ, ಬಾಳೇಹಣ್ಣು ಇವು ಹೆಚ್ಚಾಗಿ ಕಂಡು ಬರು ತ್ತಿದ್ದರೂ ಇನ್ನೂ ಅನೇಕ ಸಾಮಾನುಗಳು ಸಿಗುತ್ತಿದ್ದವು. ಒಂದು ಸಣ್ಣ ಮರದ ನೆರಳಿನಲ್ಲಿ ಇಬ್ಬರು ಕುಳಿತಿದ್ದರು. ದೂರದಿಂದ ಒಬ್ಬ ಯುವಕ ಇವರನ್ನು ನೋಡಿದ. ಇವರ ಕಡೆ ಬಂದು ಸ್ವಲ್ಪ ದೂರವಾಗಿ ಕುಳಿತ. ಅವನು ಕುಳಿತ ಸ್ವಲ್ಪ ಹೊತ್ತಿನಲ್ಲಿಯೆ ಮತ್ತೊಬ್ಬನು ಅಲ್ಲಿಗೆ ಬಂದ.

'ಏನೋ ಶಾಮಿ, ಪುನಃ ಬಂದುಬಿಟ್ಟದ್ದೀ?'

'ಏನು ಗೋಪಾಲಸ್ವಾಮಿ, ಸಮಾಚಾರ?'

'ನಾನು ಕೇಳಿದ್ದಕ್ಕೆ ಉತ್ತರವಿಲ್ಲವಲ್ಲ!'

'ಹೌದು. ನೀನು ಬಂದಿದ್ದು ಹೇಳಿದರೆ ಆಮೇಲೆ ನಾನು ಹೇಳತೇನೆ.'

'ನನಗೇನು ಇಲ್ಲಿಗೆ ಬರೋದು ಹೊಸದಲ್ಲ.'

'ನನಗೆ ಹೊಸದೇನೊ?'

'ಹೇಗಿದೆಯೊ, ನಿಮ್ಮ ತಾಯೀಗೆ?'

'ಅದಕ್ಕೇ ನಾಸಿಲ್ಲಿ ಬಂದಿರೋದು. ನಮ್ಮ ತಾಯಿ ಹೋಗು ಹೋಗು ಎಂತ ಬೊಡಕೊಂಡು ಕಳಿಸಿದ್ದಾಳೆ.'

ಮೇಲುಗಡೆಗೆ ಕುಳಿತಿದ್ದವರನ್ನು ನೋಡಿ, 'ಅವಳಿಗೆ ಈ ಬೈರಾಗಿಯಲ್ಲಿ ಬಹಳ ಗೌರವ. ಅವನು ಹೇಳಿದ ಹಾಗೇ ಜ್ವರ ಮೂರನೆಯ ದಿನ ನಿಂತು ಹೋಯಿತು. ಆದರೆ ಅವನು ಹೇಳಿದ ಹಾಗೇ ಹೊಟ್ಟೆ ಉಬ್ಬರ ಮೊದಲಾಗಿದೆ.'

'ನನಗೂ ಹಾಗೇ ಆಯಿತು ನೋಡು ನನ್ನ ಕೆಲಸ ಹೋಗತ್ತೆ ಅಂದ, ಹೋಗಿಬಿಟ್ಟಿತು.'

ಈ ಮಾತನ್ನು ಕೇಳಿದ ಕೂಡಲೆ ಮರದ ಕೆಳಗೆ ಕುಳಿತಿದ್ದ ಮನುಷ್ಯನು ಕೆಳಗಿಳಿದು ಬಂದನು.

'ಏನಪ್ಪ, ನಿಜವಾಗಿ ಅವರು ಮಹಾತ್ಮರೋ?'

'ಅದಕ್ಕೇನ್ರೀ ಸಂದೇಹ?' ಎಂದ ಶಾಮು.

'ಇಲ್ಲ, ಇವತ್ತೆ ನಾವಿಲ್ಲಿ ಬಂದಿರೋದು. ಅದಕ್ಕೆ ಕೇಳುತ್ತಾ ಇದ್ದೇನೆ.' ಎಂದ ಆ ಮನುಷ್ಯ.

'ಏನು ಕೆಲಸಕ್ಕೋ?' ಎಂದ ಗೋಪಾಲ.

'ಇದೆ. ಅವರು ಮಹಾತ್ಮರಾದರೆ ಅವರ ಕೈಯಿಂದಾಗುತ್ತೆ.' ಎಂದ ಆ ಗೃಹಸ್ಥ.

'ಏನ್ರೀ, ನೋಡಿದರೆ ನಿಮಗೇನೂ ರೋಗವಿದ್ದ ಹಾಗೆ ಕಾಣೊಲ್ಲ.' ಎಂದ ಸ್ವಾಮಿ

'ಬಂದೋರೆಲ್ಲಾ ರೋಗಕ್ಕೇ ಬರತಾರೇನೋ! ನಿನಗೆ ಬಂದಿದೆ ಆ ರೋಗ—' ಎಂದ ಗೋಪಾಲಸ್ವಾಮಿ.

'ಏನೋ ದೇವರ ದಯ -- ಯಾರ ಹತ್ತಿರ ಏನು ಮಹಾತ್ಮೆಯಿದೆಯೋ' ಎಂದ ಗೃಹಸ್ಥ.

'ನನಗೆ ಹೇಳಿದರೆ, ನಿಮ್ಮ ಕೆಲಸಕ್ಕೆ ಅವರು ಕೈಹಾಕ್ತಾರೊ ಇಲ್ಲವೊ, ಹೇಳಿ ಬಿಡತೇನ್ರೀ. ಪಾಪ, ನೀವು ಇನ್ನೆಷ್ಟು ದಿನ ಹೀಗೆ ಬರಬೇಕಾಗುತ್ತೋ!' ಎಂದ ಗೋಪಾಲ.

'ಏನೂ ಇಲ್ಲ ನೋಡಪ್ಪ. ನೀನಿನ್ನೂ ಹುಡುಗ, ನಿನಗೆ ಇದರ ಮಹತ್ವ ತಿಳಿಯೋದಿಲ್ಲ ಅದಕ್ಕೆ ನಾನು ಹೇಳಲಿಲ್ಲ. ನನಗೆ ಈಗ ಅರವತ್ತು ವಯ

ಸ್ನಾಯಿತು. ನಮ್ಮಾಕೀಗೆ ಐವತ್ತೈದಾಗಿದೆ ನಮಗೆ ದೇವರು ಬೇಕಾದ ಹಾಗೆ ಹಣ ಕೊಟ್ಟಿದಾನೆ. ಆದರೆ ನಮ್ಮ ತರುವಾಯ ಅದನ್ನನುಭವಿಸುವುದಕ್ಕೆ ಮನೆಯಲ್ಲಿ ಒಂದು ಮಗು ಕೂಡ ಇಲ್ಲ ಇದೇ ನಮ್ಮ ತೊಂದರೆ.' ಎಂದ ಗೃಹಸ್ಥ

'ಏನು ಪ್ರಪಂಚ!' ಎಂದ ಶಾಮೂ.

'ಏತಕ್ಕೆ?' ಎಂದ ಗೃಹಸ್ಥ.

'ಗೋಪಾಲಸ್ವಾಮಿ ಮನೆಯಲ್ಲಿ ದೇವರನ್ನು ಪ್ರಾರ್ಥಿಸುತ್ತಾರೆ ನಿತ್ಯವೂ–ನಮ್ಮಪ್ಪ, ಈ ವರ್ಷ ಮಗೂನ ದಯಪಾಲಿಸಬೇಡಪ್ಪ ಎಂತ! ಅಶ್ವತ್ಥಪ್ರದಕ್ಷಿಣೆಗೆ ಹಾಕೋಷ್ಟು, ಅವರ ಮನೇಲಿದೆ. ನೀವೊಂದು ನಾಲ್ಕು ತೆಗೆದುಕೊಂಡು ಹೋಗಿ ಬೇಕಾದರೆ! ಅದಕ್ಕೆ ಇಷ್ಟು ದೂರ ಬರೋದೇ?' ಎಂದ ಶಾಮಿ.

'ನಾನು ಮೊದಲೇ ಹೇಳಿದೆನಲ್ಲಪ್ಪ! ನೀನಿನ್ನೂ ಹುಡುಗ. ಹುಡುಗಾಟದ ಮಾತಿದು. ಪುತ್ರನಾದರೇನೆ ನಮಗೆ ನರಕ ತಪ್ಪೋದಪ್ಪ. ಅದಕ್ಕೇ ಇಲ್ಲಿಗೆ ನಾವಿಬ್ಬರೂ ಬಂದಿದ್ದೇವೆ.' ಎಂದ ಗೃಹಸ್ಥ.

'ಸರಿ ಸ್ವಾಮಿ, ನೀವು ಇನ್ನೂ ಎರಡು ದಿನ ಬರಬೇಕು. ಒಳಗಿನಿಂದ ಅವರು ಕೂಗಿದ ಕೂಡಲೆ ನೀವು ಹೋಗಬೇಕು. ಮೊದಲನೆಯ ಸಲವೆ ಅವರು ಕೂಗುವುದು ಅಪರೂಪ.' ಎಂದ ಗೋಪಾಲ.

ಚಿಂತಾದ್ರಯ್ಯನವರು—ಈ ಗೃಹಸ್ಥರು–ದೊಡ್ಡ ವ್ಯಾಪಾರಿಗಳು. ಅವರು ಯಾವಾಗೆಂದರೆ ಆವಾಗ ದಾನವನ್ನು ಮಾಡುತ್ತಿರಲಿಲ್ಲ. ಪ್ರತಿಯೊಂದಕ್ಕೂ ಒಂದು ಶಿಸ್ತಿರಬೇಕೆಂದು ಅವರ ಮತ. ಹೇಗೆ ಮಳೆಗಾಲದಲ್ಲಿ ಮಳೆ, ಬೇಸಿಗೆಯಲ್ಲಿ ಬಿಸಿಲು ಇರುತ್ತದೆಯೊ, ಹಾಗೆ ದಾನವನ್ನು ಮಾಡುವುದಕ್ಕೂ ಸಕಾಲವಾಗಿರಬೇಕು, ಅದನ್ನು ಒಂದು ರೀತಿಯಲ್ಲಿ ಮಾಡಬೇಕು ಎಂಬುದೇ ಅವರ ಮತ.

ಭಿಕ್ಷುಗಾರರಿಗೆ ಬಂದಾಗಲೆಲ್ಲ ಹಣವನ್ನೂ ದವಸಧಾನ್ಯವನ್ನೂ ಕೊಡುತ್ತ ಬಂದರೆ ಅವರ ಸಂಖ್ಯೆ ಹೆಚ್ಚುತ್ತಲೇ ಬರುತ್ತದೆ. ಪ್ರತಿ ನಿತ್ಯವೂ ಹಾಕುತ್ತ ಬಂದು ಒಂದು ದಿನ ಇಲ್ಲವೆಂದರೆ ಅವರು ಬೈಕೊಂಡು ಹೋಗುವು

ದಲ್ಲದೆ ತಮ್ಮ ಘನತೆಗೂ ಕಡಿಮೆಯಾಗುತ್ತೆ. ಆದ್ದರಿಂದ ಅವರ ಕಾರ್ಯಕ್ರಮ ದಲ್ಲಿ ದಿನಂಪ್ರತಿ ಬರುವ ಭಿಕ್ಷುಗಾರರ ವಿಚಾರವೇ ಇರಲಿಲ್ಲ. ಅನೇಕರು ತಮ್ಮ ಕೈಲಾದರೂ ಕೆಲಸಮಾಡದೆ ಭಿಕ್ಷನನ್ನೆತ್ತುವುದೇ ಸುಲಭವೆಂದುಕೊಂಡು ಭಿಕ್ಷುಕರಾಗಿಬಿಡುತ್ತಾರೆ ಇಂತಹ ಜನರಿಗೆ ದಿನಂಪ್ರತಿ ಭಿಕ್ಷವನ್ನು ಹಾಕುವು ದರಿಂದ ಅವರ ಸೋಮಾರಿತನಕ್ಕೆ ಉತ್ತೇಜನ ಕೊಡುವಂತಾಗುತ್ತದೆ. ಇದನ್ನು ಪದೇ ಪದೇ ಜನರಲ್ಲಿ ಹೇಳುತ್ತಿದ್ದರು.

ದಾನವೆಂದರೆ ಹೇಗಿರಬೇಕೆಂಬುದಕ್ಕೆ ಆದರ್ಶವಾಗಿ ತಮ್ಮ ಮನೆಯಲ್ಲಿ ದಾನವನ್ನು ಏರ್ಪಾಡು ಮಾಡಿದ್ದರು. ಯುಗಾದಿಯ ದಿನ ಸಾಯಂಕಾಲ ಒಂದು ಹೊತ್ತು ಮೂರುಸಾವಿರದಷ್ಟು ಬಡಬಗ್ಗರಿಗೆ ಅನ್ನ ಹಾಕುತ್ತಿದ್ದರು. ನವರಾತ್ರಿ ಒಂಭತ್ತು ದಿನಗಳು ನಲವತ್ತೇಳು ಮಂದಿ ಬ್ರಾಹ್ಮಣರನ್ನು ಕರೆ-ಯಿಸಿ, ಪ್ರತಿಯೊಬ್ಬರ ಕೈಯಲ್ಲಿಯೂ ಪ್ರತಿದಿನವೂ ಐದು ಸಾವಿರ ಗಾಯತ್ರಿ ಜಪ ಪಾರಾಯಣಾದಿಗಳನ್ನು ಮಾಡಿಸಿ, ಅವರಿಗೆ ಹತ್ತು ದಿನ ಊಟಕ್ಕೆ ಹಾಕಿ, ಹತ್ತನೆಯ ದಿನ ಹತ್ತು ರೂಪಾಯಿಗಳಿಗೆ ಕಡಿಮೆಯಿಲ್ಲದ ಹಾಗೆ ಸಂಭಾವನೆ ಕೊಟ್ಟು, ಊರಲ್ಲೆಲ್ಲಾ ಮೆರವಣಿಗೆ ಮಾಡಿಸುತ್ತಿದ್ದರು. ಆ ಹತ್ತು ದಿನಗಳೂ ಆ ಬ್ರಾಹ್ಮಣರೇ ಋಷಿಗಳೆಂದು ಭಾವಿಸುತ್ತಿದ್ದರು. ಶಿವರಾತ್ರಿಯ ದಿನ ಈಶ್ವರನ ದೇವಸ್ಥಾನಕ್ಕೆ ಎರಡು ದಿನಗಳು ಅಖಂಡ ದೀಪವನ್ನಿಡಿಸಿ, ಅಭಿ-ಷೇಕಾದಿಗಳನ್ನು ಮಾಡಿಸುತ್ತಿದ್ದರು. ಸಾಮಾನ್ಯವಾಗಿ ಹೊಸ ವೈದ್ಯರು ಯಾರು ಊರಿಗೆ ಬಂದರೂ ಅವರ ವಿಚಾರದಲ್ಲಿ ಶ್ರದ್ಧೆಯನ್ನು ವಹಿಸಿ ತಮ್ಮಲ್ಲಿ ಒಂದು ದಿನ ಇರುವಂತೆ ಏರ್ಪಾಟು ಮಾಡುತ್ತಿದ್ದರು.

ದಾನದಿಂದ ಮಕ್ಕಳಾಗುವುದು ನಿಜವಾಗಿದ್ದ ಪಕ್ಷದಲ್ಲಿ ವರುಷಕ್ಕೆ ಎರಡು ಮಕ್ಕಳಾದರೂ ಆಗಬೇಕಾಗಿತ್ತು ಚಿಂತಾದ್ರಯ್ಯನವರಿಗೆ. ಆದರೆ ದೇವರು ಈ ವಿಚಾರದಲ್ಲಿ ಅವರಿಗೆ ದಯೆಯನ್ನು ತೋರಿದಂತೆ ಕಾಣಲಿಲ್ಲ.

ತಮ್ಮ ಕಷ್ಟವನ್ನು ಈ ಬೈರಾಗಿಗಳು ನಿವಾರಿಸಬಹುದೋ ಏನೋ ಎಂದು ಅಲ್ಲಿಗೆ ಬಂದಿದ್ದರು. ಮೊಟ್ಟಮೊದಲು ಈ ಬೈರಾಗಿಗಳನ್ನು ತಮ್ಮಲ್ಲಿಗೆ ಕರೆಸಿ ಕೊಳ್ಳಬೇಕೆಂದುಕೊಂಡರು. ಆದರೆ ಬೈರಾಗಿಗಳ ಶಿಷ್ಯರು ಹೇಳಿದರು, ಅದ ಸಾಧ್ಯವೇ ಇಲ್ಲ ಎಂದು. ಅವರೇ ಇಲ್ಲಿಗೆ ಬರಬೇಕಾಯಿತು. ಸೇವಕನನ್ನು

ಕರೆದುಕೊಂಡು ಬಂದರೆ ಅವನಿಗೆ ಕೂಡಿಸಿ ಸಂಬಳ ಕೊಡಬೇಕು. ಅಲ್ಲದೆ ಮನೆಯಲ್ಲಿ ನೋಡಿಕೊಳ್ಳುವವರೂ ಇರುತ್ತಿರಲಿಲ್ಲ. ಆದಕ್ಕಾಗಿ ತಾವೇ ಬರುವುದೊಳ್ಳೆಯದೆಂದು ಗಂಡ ಹೆಂಡತಿ ಇಬ್ಬರೂ ನಡೆದುಬಂದರು.

ಈಗಿನವರಿಗೆ ನಡಿಗೆ ವಿಚಾರವೇ ಗೊತ್ತಿಲ್ಲ. ಇದನ್ನು ಚಿಂತಾದ್ರಯ್ಯನವರು ಎಲ್ಲರಿಗೂ ಪದೇಪದೇ ಹೇಳುತ್ತಿದ್ದರು. ಬೆಳಗ್ಗೆ ಎದ್ದು ಮೂರು ಮೈಲಿ ನಡೆದುಬಂದರೆ ಆಗ ಮೈ ಎಷ್ಟು ಹಗುರವಾಗಿರುವುದು ಎನ್ನುವುದನ್ನು ಅವರು ಪದೇಪದೇ ಬಣ್ಣಿಸುವುದುಂಟು. ಕೇವಲ ಬಡವರಿಗೆ ದೇವರು ಇದೊಂದು ಭಾಗ್ಯವನ್ನು ಕೊಟ್ಟಿದ್ದಾನೆ; ಪ್ರತಿದಿನವೂ ಅವರು ನಾಲ್ಕಾರು ಮೈಲಿ ನಡೆದು ಬರುತ್ತಾರೆ. ಈ ನಡಿಗೆಯಿಂದ ಅವಯವಗಳು ಸರಿಯಾಗಿ ಕೆಲಸ ಮಾಡುವ ಸ್ಥಿತಿಯಲ್ಲಿರುತ್ತವೆ. ಚಿಂತಾದ್ರಯ್ಯನಂತಹ ಸಾಹುಕಾರರಿಗೆ ಈ ಭಾಗ್ಯವು ಸಿಕ್ಕುವುದು ಬಹಳ ಅಪರೂಪ ಎಂದವರ ಮತ, ಆದ್ದರಿಂದ ಬೆಳಗ್ಗೆ ಸಾಧಾರಣವಾಗಿ ಎಲ್ಲಿಗೆ ಹೋಗಬೇಕಾದರೂ ನಡೆದೇ ಹೋಗುವುದು. ಕೆಲಸ ಸ್ವಲ್ಪ ನಿಧಾನವಾಗುತ್ತೆ. ಆಗಲಿ, ಭಯವಿಲ್ಲ. ನಾವು ಚೆನ್ನಾಗಿದ್ದರೆ ಆ ಮೇಲಲ್ಲವೇ ಕೆಲಸ! ಅವರೇನೋ ರೋಲ್ಸ್‌ರಾಯ್ಸ್‌ಮೋಟಾರು ಕಾರನ್ನೇ ಕೊಂಡುಕೊಂಡಿದ್ದರು. ಅವರ ಧರ್ಮಪತ್ನಿಯವರಿಗೇನೋ ಎಲ್ಲಿಗೆ ಹೋದರೂ ಆ 'ಕಾರಿ'ನಲ್ಲೇ ಹೋಗಬೇಕೆಂದು ಆಶೆ. ಆದರೆ ಸಾಮಾನ್ಯವಾಗಿ ಆದರ ಬೀಗದ ಕೈ ಅಯ್ಯನವರ ಹತ್ತಿರ ಇರುತ್ತಿದ್ದುದರಿಂದ ಅವರನ್ನು ಆಗಾಗ ಪೀಡಿಸಬೇಕಾಗಿ ಬರುತ್ತಿತ್ತು. ಯಾವಾಗ ಪೀಡಿಸಿದರೂ ಅಯ್ಯನವರು ನಡಿಗೆಯ ವಿಚಾರವಾಗಿ ಒಂದು ಉಪನ್ಯಾಸವನ್ನು ಕೊಡದೆ ಬೀಗದ ಕೈಯನ್ನು ಈಚೆಗೆ ತೆಗೆಯುತ್ತಿರಲಿಲ್ಲ. 'ಕಾರಿ'ರುವುದು ಗೌರವಕ್ಕಾಗಿ, ಉಪಯೋಗಕ್ಕಲ್ಲವೆಂದು ಪದೇಪದೇ ಅವರು ಹೇಳುತ್ತಿದ್ದರು. ಎಲ್ಲಾದರೂ ತಮಗೆ ಪ್ರವೇಶ ಸಿಕ್ಕುವುದು ಕಷ್ಟವೆಂದು ಕಂಡುಬಂದಾಗ ತಮ್ಮ ಕಾರನ್ನು ಉಪಯೋಗಿಸುತ್ತಿದ್ದರು. ಅದು ಕಾರಿನ ಉಪಯೋಗವಲ್ಲ, ಆದರ ಗೌರವದ ಉಪಯೋಗ!

'ಇನ್ನೆಷ್ಟು ದಿನ ಹೀಗೆ ಬರಬೇಕಾಗುತ್ತೋ!' ಎಂದು ಮನಸ್ಸಿನಲ್ಲಿ ಅಂದುಕೊಂಡು ಹಿಂತಿರುಗುವ ಹೊತ್ತಿಗೆ ಯಾರೋ ತಮ್ಮ ಹೆಸರನ್ನು ಕರೆದ ಹಾಗಾಯಿತು.

'ಚಿಂತಾದ್ರಯ್ಯನವರೆ.'

'ಹೌದು, ನಾನೇ.'

'ಇಲ್ಲಿಗೆ ಬರಬೇಕಂತೆ.'

'ಕರೆಯುತ್ತಿದ್ದಾರೆ, ಬಾರೇ!' ಎಂದು ಧರ್ಮಪತ್ನಿಯನ್ನು ಕೂಗಿ, ಆಕೆಯ ಜೊತೆಯಲ್ಲಿ ಅವರು ಕರೆದಲ್ಲಿಗೆ ಹೋದರು.

ಎದುರಿಗೆ ಒಂದು ದೊಡ್ಡ ಮಂಟಪ. ಮುಂಭಾಗವು ದೇವರ ಗುಡಿಯ ಪ್ರಾಕಾರವಾಗಿತ್ತೋ ಏನೋ. ಆ ಪ್ರಾಕಾರದ ಮೇಲೆ ಬಣ್ಣ ಬಣ್ಣಗಳಿದ್ದವು. ಅದನ್ನು ನೋಡಿದರೆ ಯಾರೋ ಕೆಲವು ವರ್ಷಗಳ ಹಿಂದೆ ಆ ಗೋಡೆಗಳ ಮೇಲೆ ಚಿತ್ತಾರಗಳನ್ನು ಬರೆಸಿದ್ದ ಹಾಗೆ ತೋರಿತು. ಆ ಗೋಡೆಯ ಕೊನೆಯಲ್ಲಿ ಕಲ್ಲಿನ ಬಂಡೆಗಳನ್ನು ಹಾಕಿದ್ದರು. ಬಾಗಿಲು ಕಬ್ಬಿಣದ್ದಿದ್ದ ಹಾಗೆ ತೋರಿತು. ತೆರೆದಿತ್ತು. ಹಾಕುವುದಕ್ಕೆ ಬರುತ್ತಿದ್ದ ಹಾಗೆ ತೋರಲಿಲ್ಲ.

ಇಬ್ಬರೂ ಒಳಕ್ಕೆ ಹೋದರು. ಎದುರಿಗೆ ಗರ್ಭಗುಡಿಯಿದ್ದ ಹಾಗಿತ್ತು. ಅದರ ಮುಂದುಗಡೆ ಹತ್ತಾರು ಕಂಬಗಳು; ಚಾವಣಿಯು ಕೂಡ ಕಲ್ಲಿನದೇ. ಒಳಗಡೆ ಸುಣ್ಣವನ್ನು ಗೋಡೆಗಳಿಗೆ ತೋರಿಸಿ ಎಷ್ಟು ವರ್ಷಗಳಾಗಿತ್ತೋ! ಅದರೊಳಗಡೆ ಬಲಗಡೆಯಲ್ಲಿ ಬೈರಾಗಿ ಕುಳಿತಿದ್ದ. ಇವರು ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿದರು.

ಬೈರಾಗಿ ಕೈಯಿಂದಲೇ ಇವರನ್ನು ಕೂಡುವಂತೆ ಸನ್ನೆ ಮಾಡಿದ. ಅಲ್ಲಿಯೇ ಪಕ್ಕದಲ್ಲಿ ಕುಳಿತಿದ್ದ ನೇಮಿಚಂದ್ರ ಪಂಡಿತರು ಅವರಿಗೆ ಸ್ಥಳವನ್ನು ತೋರಿಸಿದರು. ಇಬ್ಬರೂ ಹೋಗಿ ಕುಳಿತರು.

ಬೈರಾಗಿ ಪುನಃ ಸನ್ನೆ ಮಾಡಿದ 'ಹೇಳು' ಎಂತ ನೇಮಿಚಂದ್ರಪಂಡಿತರಿಗೆ. ಬೈರಾಗಿ ಕಣ್ಣು ಮುಚ್ಚಿಕೊಂಡು ಕುಳಿತುಕೊಂಡ.

ನೇಮಿಚಂದ್ರ ಪಂಡಿತರು ಹೇಳತೊಡಗಿದರು:

'ನನಗೆ ಗುರುಗಳು ಆಜ್ಞಾಪಿಸಿದ್ದಾರೆ. ಹೇಳುತ್ತಿದ್ದೇನೆ. ಅವರು ಯಾರೊಡನೆಯೂ ಮಾತನಾಡುವುದಿಲ್ಲ, ಸಾಮಾನ್ಯವಾಗಿ. ತಮ್ಮ ವಿಚಾರವಾಗಿ ಅವರು ನನಗೆ ಅಪ್ಪಣೆ ಕೊಡಿಸಿದ್ದಾರೆ.'

'ಹೇಳಿ' ಎಂದರು ಚಿಂತಾದ್ರಯ್ಯನವರು.

'ನಿಮ್ಮ ಹೆಸರು ಚಿಂತಾದ್ರಯ್ಯ. ನಿಮ್ಮ ಅಣ್ಣಂದಿರು ಮಾಳವ ದೇಶದಲ್ಲಿದ್ದಾರೆ. ಅವರಿಗೂ ನಿಮಗೂ ವ್ಯವಹಾರವಿಲ್ಲ. ನೀವು ಬೇರೆಯಾಗಿಬಿಟ್ಟಿದ್ದೀರಿ.'

'ಹೌದು.'

'ನಿಮಗೆ ಸಾಕಾದಷ್ಟು ಹಣವಿದೆ. ಬಂಗಾರವನ್ನು ನೀವು ಯಾರಿಗೂ ತಿಳಿಯದ ಹಾಗೆ ಒಂದು ಕಡೆ ಹೂತಿಟ್ಟಿದ್ದೀರಿ.'

ಮನಸ್ಸಿನಲ್ಲಿಯೆ 'ಹೌದು' ಎಂದುಕೊಂಡು ಚಿಂತಾದ್ರಯ್ಯ ಈಚೆ 'ಉಂಟೆ! ಅಷ್ಟೆಲ್ಲಿ ಬರಬೇಕು' ಅಂದರು.

'ನೀವು ಇಲ್ಲಿಗೆ ಬಂದಿರುವುದು ನಿಮ್ಮ ಸಂತಾನದ ವಿಚಾರವಾಗಿ.'

'ಸರಿ.'

'ನೀವು ಈಗ್ಗೆ ಎರಡು ವರ್ಷದ ಕೆಳಗೆ ಒಂದು ಕರೀ ನಾಗರಹಾವನ್ನು ನಿಮ್ಮ ಮನೆಯಲ್ಲಿ ಕೊಂದಿದ್ದೀರಿ.'

'ಹೌದು. ನಾನು ಕೊಲ್ಲಲಿಲ್ಲ.'

'ಹೇಗಾದರೂ ಆಗಲಿ, ಅದು ಸತ್ತದ್ದು ನಿಮ್ಮಿಂದಲೇ.'

'ಹೌದು.'

'ಮೊನ್ನೆ ಯುಗಾದಿಯ ದಿನ ನಿಮ್ಮಲ್ಲಿದ್ದ ಒಂದು ದೊಡ್ಡ ಅಶ್ವತ್ಥದಗಿಡ ಬಿದ್ದು ಹೋಯಿತು.'

'ಹೌದು.'

'ಇದರಿಂದ ನಿಮ್ಮ ವಿಚಾರದಲ್ಲಿ ದೈವಕೃಪೆ ಈ ವಿಚಾರದಲ್ಲಿ ಹಿಂದೆ ಯಿದ್ದ ಹಾಗೆ ತೋರುತ್ತೆ. ಆದರೆ ಗುರುಗಳು ಮನಸ್ಸು ಮಾಡಿದರೆ ನಮಗೆ ಬೇಕಾದ್ದು ನಡೆಯಬಹುದು.'

'ಮನಸ್ಸು ಮಾಡಬೇಕು ಸ್ವಾಮಿ. ತಾವು ಗುರುಗಳಿಗೆ ಹೇಳಿ ಸಹಾಯ ಮಾಡಬೇಕು.'

ನೇಮಿಚಂದ್ರಪಂಡಿತರು ಗುರುಗಳ ಕಡೆ ತಿರುಗಿ ಹೇಳಿದರು. 'ಈತನು ಬಹಳ ಜ್ಞಾನಿ. ದೇವರಲ್ಲೂ ಬ್ರಾಹ್ಮಣರಲ್ಲೂ ಭಕ್ತಿಯುಳ್ಳವನು. ಈತನ ಕೊರತೆಯನ್ನು ಗುರುಗಳು ನಿವಾರಿಸಬೇಕು. ಕೆಲಸ ಮಾಡಿಕೊಡಬೇಕು.'

ಗುರುಗಳು ಮಾತನಾಡಲಿಲ್ಲ ಪಂಡಿತರಿಗೆ ತಿಳಿಯುವಂತೆ ಸನ್ನೆ ಮಾಡಿದರು. ನೇಮಿಚಂದ್ರರು ಮೆಲ್ಲನೆ 'ಗುರುಗಳು ನನ್ನನ್ನು ನಿಮ್ಮ ಕೈ ನೋಡುವಂತೆ ಹೇಳುತ್ತಾರೆ' ಅಂದರು.

ಚಿಂತಾದ್ರಯ್ಯ ಕೈತೋರಿಸಿದರು. ಅದನ್ನು ಚೆನ್ನಾಗಿ ನೋಡಿದರು ನೇಮಿಚಂದ್ರರು. ಆಮೇಲೆ ಚಿಂತಾದ್ರಯ್ಯನವರ ಧರ್ಮಪತ್ನಿಯ ಕೈಕೂಡ ನೋಡಬೇಕೆಂದರು. ಆಕೆ ಬಲಗೈ ಕೊಟ್ಟಳು.

'ಇಲ್ಲಮ್ಮ, ಎಡಗೈ' ಎಂದರು ಪಂಡಿತರು.

ಕೈನೋಡಲು ಸ್ವಲ್ಪ ಹೊತ್ತು ಹಿಡಿಯಿತು. ತನ್ನ ಬಳಿಯಲ್ಲಿದ್ದ ಭೂತ-ಕನ್ನಡಿಯಿಂದ ಚೆನ್ನಾಗಿ ಪರೀಕ್ಷಿಸಿದರು. ಆಮೇಲೆ ಗುರುಗಳ ಕಡೆಗೆ ತಿರುಗಿ 'ಏನೋ ಇದೆ. ಆದರೆ ಸ್ಪಷ್ಟವಾಗಿಲ್ಲ' ಅಂದರು.

ಚಿಂತಾದ್ರಯ್ಯ ಹೇಳಿದರು. 'ಹಿಂದೆ ನಾನು ನಾಲ್ಕಾರು ಜನರಿಗೆ ತೋರಿಸಿದ್ದೇನೆ. ಸ್ಪಷ್ಟವಾಗಿಲ್ಲ ಎಂದು ಯಾರೂ ಹೇಳಿಲ್ಲ. ಪ್ರತಿಯೊಬ್ಬರೂ ಇದ್ದ ಹಾಗಿದೆ, ನೋಡೋಣ ಎಂದು ಏನೇನೋ ಮಾಡಿದ್ದಾರೆ. ಆದರೆ ಅದರಿಂದ ಯಾವ ಉಪಕಾರವೂ ಇದುವರೆಗೂ ಆಗಿಲ್ಲ.'

ಬೈರಾಗಿ ಸನ್ನೆ ಮಾಡಿದ. ನೇಮಿಚಂದ್ರರು ಅದನ್ನು ತಿಳಿದುಕೊಂಡು ಚಿಂತಾದ್ರಯ್ಯನವರಿಗೆ ಹೇಳಿದರು. 'ಏನೋ ನೋಡೋಣ....ಎಂದಿದ್ದಾರೆ. ಆದರೆ ತಮಗೆ ಈ ಮಾತನ್ನು ಹೇಳಬೇಕೆಂದು ಸೂಚಿಸಿದ್ದಾರೆ. ಮನುಷ್ಯನಿಗೆ ಎರಡು ಬಲಗಳು— ಕಾಯಬಲ, ಮನೋಬಲ. ಕಾಯಬಲ ಮನೋ-ಬಲಗಳೆರಡೂ ಸಮತೂಕವಿದ್ದಲ್ಲಿ ಈ ಕೆಲಸ ನೆರವೇರುವುದು. ಪ್ರಕೃತ ಕಾಯಬಲ ತಮಗೆ ಕಡಿಮೆಯಾಗಿದೆ. ಆದರೂ ಅದಕ್ಕೆ ತಾವು ಕಾಯಬಲ ಮತ್ತೊಬ್ಬರಿಗೆ ಸುಲಭವಾಗಿ ಸಿಗುವಂತೆ ಸಹಾಯ ಮಾಡಿದರೆ ತಮಗೆ ಅನುಕೂಲವಾಗಬಹುದು. ಅದಕ್ಕೆ ತಾವು ಒಪ್ಪುವುದಾದರೆ ಮುಂದಿನ ಯೋಚನೆ.'

'ಆಗಬಹುದು. ತಾವು ಹೇಗೆ ಹೇಳಿದರೆ ಹಾಗೇ ಸರಿ.'

'ಈಗ ಇಲ್ಲಿ ವ್ಯಾಯಾಮಶಾಲೆಗಳು ಅನೇಕವಾಗಿವೆ. ಅವುಗಳಲ್ಲಿರುವ ಯುವಕರಿಗೆ ಸಾಕಾದಷ್ಟು ಉತ್ತೇಜನವಿಲ್ಲ. ಆದಕ್ಕಾಗಿ ತಾವು ಸಹಾಯ ಮಾಡಬೇಕು.'

'ಆಗಲಿ, ನೀವು ಕೇಳಿದಷ್ಟು ಕೊಡುತ್ತೇನೆ.'

ನೇಮಿಚಂದ್ರಪಂಡಿತರು ಬೈರಾಗಿಯನ್ನು ನೋಡಿದರು. ಬೈರಾಗಿ ಕಣ್ಣುಮುಚ್ಚಿಕೊಂಡಿದ್ದ. ಅಲುಗಾಡಲಿಲ್ಲ. ನೇಮಿಚಂದ್ರಪಂಡಿತರು ಮೆಲ್ಲನೆ 'ಸಮಾಧಿಯಲ್ಲಿದ್ದಾರೆ, ಸ್ವಲ್ಪ ಸುಮ್ಮನಿರಿ!' ಎಂದ.

ಐದಾರು ನಿಮಿಷ ಎಲ್ಲರೂ ಸುಮ್ಮನೆ ಕುಳಿತರು. ಆಮೇಲೆ ಬೈರಾಗಿ ಮೆಲ್ಲನೆ ಕಣ್ಣು ತೆರೆದ. ನೋಡಿದ. ನೇಮಿಚಂದ್ರರಿಗೆ ಸನ್ನೆಮಾಡಿದ. 'ಯಾತಕಿನ್ನೂ ಕುಳಿತಿದ್ದಾರೆ. ಎಂದು ಗುರುಗಳು ಕೇಳುತ್ತಿದ್ದಾರೆ' ಎಂದರು ನೇಮಿಚಂದ್ರಪಂಡಿತರು.

'ಹೇಗಾದರೂಮಾಡಿ ಅನುಗ್ರಹಮಾಡಬೇಕು.'ಎಂದರು ಚಿಂತಾದ್ರಯ್ಯ. ನೇಮಿಚಂದ್ರಪಂಡಿತರು ಮೆಲ್ಲನೆ 'ಏನಾದರೂ ಕೊಡುತ್ತೇನೆಂದು ಹೇಳಿ, ಮೂರು ಸಾವಿರಕ್ಕೆ ಕಡಿಮೆ ಹೇಳಿದರೆ ವ್ಯಾಯಾಮಶಾಲೆಗೆ ಅನುಕೂಲವಾಗುವ ಬಗೆ ಹೇಗೆ? ಈ ಊರಿನಲ್ಲಿರುವ ವ್ಯಾಯಾಮಶಾಲೆಗಳಿಗೆ ಗುರುಗಳೇ ಕೊಡುವಂತೆ ಅವರ ಕೈಗೆ ಕೊಡುತ್ತೇನೆಂದು ಹೇಳಿಬಿಡಿ.' ಎಂದರು.

ಚಿಂತಾದ್ರಯ್ಯನವರು ಕೈಮುಗಿದುಕೊಂಡು ಹೇಳಿದರು. 'ತಾವು ಹೇಗಾದರೂ ಮಾಡಿ ಅನುಗ್ರಹ ಮಾಡಬೇಕು. ತಮ್ಮ ಸಲಹೆಯಂತೆ ನಾನು ತಮಗೆ ಮೂರು ಸಾವಿರ ರೂಪಾಯಿನ ಚೆಕ್ಕು ಕೊಟ್ಟುಬಿಡುತ್ತೇನೆ ವ್ಯಾಯಾಮಶಾಲೆಗಾಗಿ! ತಾವು ಅದನ್ನು ಅನುಗ್ರಹಕ್ಕೆ ಹಣವೆಂದಂದುಕೊಳ್ಳಬಾರದು. ನನ್ನ ವಂಶವನ್ನು ಉದ್ಧಾರ ಮಾಡಬೇಕು.'

ಬೈರಾಗಿ ನಕ್ಕ. ನೇಮಿಚಂದ್ರ ಪಂಡಿತರ ಮುಖವನ್ನು ನೋಡಿ ಸನೆ ಮಾಡಿದ.

ನೇಮಿಚಂದ್ರಪಂಡಿತರು ಚಿಂತಾದ್ರಯ್ಯನವರ ಬಳಿ ಹೇಳಿದರು. 'ಗುರುಗಳು ಹೇಳುತ್ತಿದ್ದಾರೆ–ಹೋದ ವರ್ಷ ತಮಗೆ ತಮ್ಮದೊಡ್ಡಮ್ಮನ ಕಡೆಯಿಂದ ಮಕ್ಕಳಿಲ್ಲದೆ ಇಪ್ಪತ್ತುಸಾವಿರ ರೂಪಾಯಿ ಆಸ್ತಿ ಬಂದಿದೆ. ಮೂರುಸಾವಿ-

ರಕ್ಕೆ ಒಂದು ಮಗುವನ್ನು ಪಡೆದು ಹದಿನೇಳುಸಾವಿರ ರೂಪಾಯಿ ಲಾಭವನ್ನು ಪಡೆಯಲು ಇಲ್ಲಿಗೆ ದಯಮಾಡಿಸಿದಿರಾ? ಎಂದು ಅವರು ಕೇಳುತ್ತಿದ್ದಾರೆ.'

ಬಂದಿದ್ದೇನೋ ನಿಜ. ಅದು ಯಾರಿಗೂ ಗೊತ್ತಿಲ್ಲ. ಈ ಬೈರಾಗೀಗೆ ಹೇಗೆ ತಿಳಿದಿರಬೇಕು? ನಿಜವಾಗಿ ಇವನು ಮಹಾತ್ಮನಿರಬೇಕು. ತನ್ನ ಆಸ್ತಿಯಲ್ಲಿ ಇಪ್ಪತ್ತು ಸಾವಿರ ಕೇವಲ ಒಂದು ಹಿಡಿ. ಆದಾಗ್ಯೂ ತಾನು ಅದನ್ನು ಕೊಟ್ಟುಬಿಡುತ್ತೇನೆಂದು ಹೇಳುವುದಕ್ಕೆ ಮನಸ್ಸು ಬಾರದು—ಎನ್ನುತ್ತ ಚಿಂತಾದ್ರಯ್ಯನವರಿಗೆ ದಿಕ್ಕುತೋಚದಂತಾಯಿತು.

ಬೈರಾಗಿ ಪುನಃ ಸನ್ನೆ ಮಾಡಿದ. ನೇಮಿಚಂದ್ರರು ಚಿಂತಾದ್ರಯ್ಯನವರಿಗೆ ಹೇಳಿದರು. 'ತಮ್ಮ ಮನಸ್ಸು ಪರಿಪಕ್ವವಾದ ಕಾಲಕ್ಕೆ ಹೀಗೆ ಬರಬಹುದೆಂದು ಗುರುಗಳು ಆಜ್ಞಾಪಿಸುತ್ತಿದ್ದಾರೆ'

ಚಿಂತಾದ್ರಯ್ಯನವರಿಗೆ ತಲೆ ಹೊಡೆದ ಹಾಗಾಯಿತು. ಮೆಲ್ಲನೆ ನೇಮಿಚಂದ್ರರ ಬಳಿ ಹೇಳಿದರು. 'ನನ್ನ ಮನಸ್ಸಿನಲ್ಲಿ ಅದೇ ಯೋಚನೆ ಮಾಡುತ್ತಿದ್ದೇನೆ. ಆ ಇಪ್ಪತ್ತು ಸಾವಿರವನ್ನೂ ಇದಕ್ಕಾಗಿಯೆ ಏತಕ್ಕೆ ಉಪಯೋಗಿಸಬಾರದು, ಎಂದು.'

ಬೈರಾಗಿ ಪುನಃ ಸನ್ನೆಮಾಡಿದ. ನೇಮಿಚಂದ್ರರು ಆಶ್ಚರ್ಯದಿಂದ ಹೇಳಿದರು, 'ಗುರುಗಳು ಅಪ್ಪಣೆಕೊಡಿಸುತ್ತಿದ್ದಾರೆ, ಕೋಪಿಸಿಕೊಳ್ಳಬೇಡಿ. ತಾವು ಮೂವತ್ತುಸಾವಿರ ರೂಪಾಯಿನ ಆಸ್ತಿಯನ್ನು ತಮ್ಮನಿಗೆ ಕೊಡದೆ ದಕ್ಕಿಸಿಕೊಂಡಿದ್ದೀರಿ. ಇವೆರಡು ಆಸ್ತಿಗಳೂ ತಮ್ಮಲ್ಲಿರುವಾಗ ಗುರುಗಳ ಕೈಲಿ ಏನು ಮಾಡುವುದಕ್ಕೂ ಸಾಧ್ಯವಿಲ್ಲ—ಎಂದು.'

ಚಿಂತಾದ್ರಯ್ಯ ಚಮಕಿತರಾಗಿ 'ಅಂಥಾದ್ದೇನೂ ಇಲ್ಲ. ಆದರೆ ಈ ಐವತ್ತುಸಾವಿರವನ್ನು ಗುರುಗಳ ಕೈಲಿಡಲು ಸಿದ್ಧವಾಗಿದ್ದೇನೆ' ಎಂದರು.

ಗುರುಗಳು ಪುನಃ ಸನ್ನೆಮಾಡಿದರು. ನೇಮಿಚಂದ್ರರು ಹೇಳಿದರು, 'ಗುರುಗಳಿಗೆ ಆ ಮೂವತ್ತು ಸಾವಿರದ ವಿಲೇವಾರಿ ಗೊತ್ತಂತೆ! ಆದಾಗ್ಯೂ ತಾವು ಈ ಹಣವನ್ನು ಬಿಟ್ಟುಬಿಡುವುದರಿಂದ ತಮಗೆ ಎಲ್ಲಾ ವಿಚಾರದಲ್ಲೂ ಅನುಕೂಲವಾಗುವುದರಲ್ಲಿ ಸಂಶಯವಿಲ್ಲ, ಎನ್ನುತ್ತಿದ್ದಾರೆ. ತಾವು ಹೋಗಿ ಬನ್ನಿ. ಬರುವ ಶುಕ್ರವಾರ ಇಲ್ಲಿಗೆ ಬಂದರೆ ಪ್ರಸಾದ ಕೊಡುತ್ತಾರೆ.'

ಚಿಂತಾದ್ರಯ್ಯನವರು ತಮ್ಮ ಚೆಕ್ ಬುಕ್ಕನ್ನು ತೆಗೆದು ಇಪ್ಪತ್ತೈದು ಸಾವಿರಕ್ಕೆ ಬರೆದುಕೊಟ್ಟು, ಮಿಕ್ಕದ್ದಕ್ಕೆ ಬಂದಿರುವ ಒಡವೆವಸ್ತುಗಳನ್ನೇ ಕೊಡುತ್ತೇನೆಂದು ಹೇಳಿ ಹೊರಟುಹೋದರು.

ಆಮೇಲೆ ಅವರಿವರು ಬಂದರು. ಆಮೇಲೆ ಶಾಮಿ ಬಂದ. ನಮಸ್ಕಾರ ಮಾಡಿದ. ನೇಮಿಚಂದ್ರರ ಮೂಲಕವೇ ಬೈರಾಗಿ ಮಾತನಾಡಿದ.

'ನನ್ನ ಸ್ನೇಹಕ್ಕೆ ಬೈಯುತ್ತಾ ಇದ್ದೆ?'

'ನಾನು ಬೈಲಿಲ್ಲ. ಆದರೆ ಹೋಗು ಹೋಗು ಎಂದು ನಮ್ಮಮ್ಮ ಬಡಕೋತಾಳೆ ಎಂದೆ.'

'ಏತಕ್ಕೆ?'

'ಮನೆಯಲ್ಲಿ ಅವಳಿಗೆ ಆಹಾರ ಸರಿಯಿಲ್ಲ. ನಮ್ಮ ತಂದೇಗೆ ಬರೋದು ನಲವತ್ತುರೂಪಾಯಿ. ನಾನಿನ್ನೂ ಓದುತ್ತಾ ಇದ್ದೇನೆ. ನನ್ನ ನಂಬಿಕೆ, ಆಹಾರ ಸರಿಯಾಗಿ ಬಿದ್ದರೆ ನಮ್ಮಮ್ಮ ಸರಿಹೋಗ್ತಾಳೆ ಅಂತ.'

'ಆಹಾರಕ್ಕೆ ಎಷ್ಟು ಬೇಕಾಗುತ್ತೆ?'

'ನನಗೆಲ್ಲಾದರೂ ಮೂವತ್ತು ರೂಪಾಯಿ ಸಂಬಳ ಸಿಕ್ಕರೆ ಎಲ್ಲಾ ಸರಿ ಹೋಗುತ್ತೆ ಎಂದುಕೊಂಡಿದ್ದೇನೆ.'

'ಸರಿ, ನಾನು ನಿನಗೆ ಮೂವತ್ತು ರೂಪಾಯಿ ತಿಂಗಳಿಗೆ ಕೊಡುತ್ತೇನೆ. ನೀನು ಪ್ರತಿದಿನವೂ ನಮ್ಮ ವ್ಯಾಯಾಮಶಾಲೆಗೆ ಹೋಗಬೇಕು. ನೇಮಿಚಂದ್ರ ಪಂಡಿತರನ್ನು—ನನ್ನನ್ನು—ನೋಡಬೇಕು. ಇವತ್ತೇ ಈ ಮೂವತ್ತುರೂಪಾಯಿ ತೆಗೆದುಕೋ. ತಿಂಗಳಿಗೆ ಸರಿಯಾಗಿ ಬಾ.'

'ನನಗೆ ಬೇಡ.'

'ಏತಕ್ಕೆ?'

'ನಾನು ಭಿಕ್ಷಕ್ಕೆ ಬಂದಿರಲಿಲ್ಲ. ನನಗೆ ಕೆಲಸ ಬೇಕು.'

'ಹುಚ್ಚು ಹುಡುಗ! ನಿನ್ನಿಂದ ಕೆಲಸ ತೆಗೆಯುವುದು ನನಗೆ ಗೊತ್ತು. ಈಗ ಇದನ್ನು ಒಪ್ಪಿಕೊಂಡು ಹೊರಡು.'

'ಹಾಗೇ ಆಗಲಿ.' ನಮಸ್ಕಾರ ಮಾಡಿ ಹೋಗುವನು, ಹಣವನ್ನು ತೆಗೆದು ಕೊಂಡು.

ಇನ್ನಿಬ್ಬರು ಬಂದು ಹೋದರು. ಆಮೇಲೆ ಗೋಪಾಲಸ್ವಾಮಿ ಬಂದ. ನಮಸ್ಕಾರ ಮಾಡಿದ.

'ಏನು ಬಂದಿದ್ದು?'

'ತಾವು ಹೇಳಿದಂತೆ ಕೆಲಸ ಹೋಯಿತು.'

'ಬಹಳ ಸಂತೋಷ.'

'ನನಗೆ ತೊಂದರೆಯಾದರೆ ತಮಗೆ ಸಂತೋಷವಿದ್ದ ಹಾಗೆ ತೋರುತ್ತೆ.'

'ತೊಂದರೆಯಾದಾಗಲೆ ಕವಿತ್ವ ಸರಿಯಾಗಿ ಹೊರಡಬೇಕಾದರೆ.'

'ನಾನು ಕವಿ ಎಂದು ತಮಗೆ ಹೇಗೆ ಗೊತ್ತು?'

'ನಾನಿಲ್ಲಿರುವುದು ನಿನ್ನ ಪ್ರಶ್ನೆಗೆ ಉತ್ತರವನ್ನು ಕೊಡುವುದಕ್ಕಲ್ಲ. ನನ್ನಂತೆ ನೀನೂ ಆದರೆ ಆಗ ನಿನಗೆ ಎಲ್ಲಾ ವಿಚಾರಗಳೂ ತಿಳಿಯುತ್ತೆ.'

'ನಾನಿಲ್ಲಿಗೆ ಬಂದಿರೋದು........'

'ಹೌದು. ಯಾವಾಗ ನಿನಗೆ ಸರ್ಕಾರಿ ಕೆಲಸ ಸಿಕ್ಕುತ್ತೆ ಎಂತ ಕೇಳೋದಕ್ಕೆ.'

'ಯಾವ ಕೆಲಸವಾದರೂ ಸರಿಯೆ.'

'ನನ್ನಲ್ಲಿ ಕೆಲಸವಿದೆ, ಮಾಡುವುದಾದರೆ.'

'ಆಗಬಹುದು.'

'ಸಂಬಳ ಕೇಳಲಿಲ್ಲವಲ್ಲ?'

'ನಿಮ್ಮ ಕೆಲಸಕ್ಕೆ ಸಂಬಳ ಕೇಳುವವನಲ್ಲ ನಾನು!'

'ಆಗಬಹುದು. ಇಂದಿನಿಂದ ನೀನು ನಮ್ಮ ಕೆಲಸದಲ್ಲಿರು. ನಿನ್ನ ಖರ್ಚೆಲ್ಲಾ ನಾನೇ ನೋಡಿಕೊಳ್ಳುತ್ತೇನೆ. ನಿಮ್ಮ ಮನೆಯ ಖರ್ಚಿಗೆ ಬೇಕಾದ್ದನ್ನು ಈ ಹಣದಲ್ಲಿ ನೀನು ತೆಗೆದುಕೊಳ್ಳಬಹುದು. ನಿನ್ನ ಕೆಲಸಕ್ಕೆ ಸದ್ಯದಲ್ಲಿ ಮುನ್ನೂರು ರೂಪಾಯಿಗಳಿಟ್ಟಿದ್ದೇನೆ. ಸಾಯಂಕಾಲ ಒಂಭತ್ತುಗಂಟೆಗ ಇದೇ ಸ್ಥಳದಲ್ಲಿ ನನ್ನನ್ನು ಬಂದು ಕಾಣತಕ್ಕದ್ದು.'

ಹೀಗೇ ನಾಲ್ಕಾರು ಜನರು ಬಂದು ಹೋದರು. ಸಾಯಂಕಾಲ ಆರು ಗಂಟೆ ಹೊತ್ತಿಗೆ ಬಾಗಿಲನ್ನು ಹಾಕಿದರು. ಈಚೆಯಿದ್ದ ಪ್ರಾಕಾರದ ಬಾಗಿಲು ಹಾಗೇ ಇತ್ತು. ಹಿಂದುಗಡೆ ಇದ್ದ ಒಂದು ಬಾಗಿಲಿಂದ ಬೈರಾಗಿ ಅವನ ಇಬ್ಬರು ಶಿಷ್ಯರು ನೇಮಿಚಂದ್ರ ಪಂಡಿತ ಇವರುಗಳು ಆಚೆಗೆ ಬಂದರು. ಅಲ್ಲಿ ಒಂದು ಬುರುಕಿ ಹಾಕಿದ ಮೋಟಾರು ಕಾದಿತ್ತು. ಇವರು ಈಚೆಗೆ ಬರುತ್ತಲೇ ನಡಿಸುವವನು ಮೋಟಾರನ್ನು ರೇಗಿಸಿದ; ಇವರು ಕೂತೊಡನೆಯೆ ಅದು ಕದಲಿತು. ಒಳಗಿನಿಂದ ಇವರು ಆಚೆ ಇದ್ದದ್ದನ್ನು ನೋಡಬಹುದಾಗಿತ್ತು. ಆದರೆ ಆಚೆ ಬೀದಿಯಲ್ಲಿರುವವರಿಗೆ ಇವರು ಕಾಣುತ್ತಿರಲಿಲ್ಲ.

## ೧೫

ಪುನಃ ಒಂಭತ್ತುಗಂಟೆಗೆ ಐದು ನಿಮಿಷವಿರಬೇಕಾದರೆ ಗಾಡಿಯು ಹಿಂದಕ್ಕೆ ಬಂತು. ಬೈರಾಗಿ, ನೇಮಿಚಂದ್ರ ಮತ್ತು ಇಬ್ಬರು ಶಿಷ್ಯರು ಮೋಟಾರಿ ನಿಂದಿಳಿದು ಹಿಂದಿನ ಭಾಗದಿಂದಲೇ ಒಳಕ್ಕೆ ಹೋದರು. ಒಂಭತ್ತುಗಂಟೆಗೆ ಸರಿಯಾಗಿ ಗೋಪಾಲಸ್ವಾಮಿ ಬಂದ. ಬಾಗಿಲಲ್ಲಿ ನಿಂತಿದ್ದ ಒಬ್ಬ ಸೇವಕ ಬಾಗಿಲನ್ನು ತಟ್ಟಿದ. ಬಾಗಿಲು ತೆರೆಯಲ್ಪಟ್ಟಿತು. ಗೋಪಾಲಸ್ವಾಮಿ ಒಳಕ್ಕೆ ಹೋದ. ಬಾಗಿಲನ್ನು ಮುಚ್ಚಿದರು.

ಬೈರಾಗಿ ತನ್ನ ಸ್ಥಳದಲ್ಲೇ ಕೂತಿದ್ದ. ನೇಮಿಚಂದ್ರ ಕೇಳಿದ ಗೋಪಾಲ ನನ್ನು 'ಏನಯ್ಯಾ, ನಮ್ಮ ಜೊತೆಯಲ್ಲಿ ಕೆಲಸಮಾಡಲು ನಿನಗೆ ಮನಸ್ಸು ಒಪ್ಪುತ್ತದೆಯೆ?'

'ಒಪ್ಪಿಕೊಂಡಿದ್ದೇನಲ್ಲ!'

'ಹಾಗಲ್ಲ. ಪುನಃ ಯೋಚನೆ ಮಾಡು.'

'ನನ್ನ ಮನಸ್ಸು ಆಗಲೇ ಹೇಳಿತು. ನಾನು ಒಪ್ಪಿಕೊಂಡಿದ್ದೇನೆ. ಆಡಿದ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುವವನಲ್ಲ.'

ಬೈರಾಗಿ ಮಾತನಾಡಿದ 'ಬಹಳ ಸಂತೋಷ. . ಆದರೆ ನೀನು ಈಗ ಕೆಲಸ ಮಾಡುವುದಕ್ಕೆ ಮುಂಚಿತವಾಗಿ ನಮಗೆ ಮಾತು ಕೊಡಬೇಕು—ನೀನು

ಮಾಧವ ಒಡೆಯರಿಗಾಗಿ ಕೆಲಸ ಮಾಡುತ್ತೇನೆಂದು; ಅಲ್ಲದೆ, ಮಾಧವ ಒಡೆಯರೆ ನಿನಗೆ ನಿಜವಾದ ರಾಜರೆಂದು.'

'ಒಪ್ಪಿದ್ದೇನೆ. ಸಿದ್ಧವಾಗಿದ್ದೇನೆ.'

'ಹಾಗಾದರೆ ಹೇಳು. ಮಾಧವ ಒಡೆಯರು ನನಗೆ ರಾಜರು. ನನ್ನ ಪ್ರಾಣವು ಅವರಿಗೆ ಸೇರಿದ್ದು. ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ ನನಗೆ ನರಕಪ್ರಾಪ್ತಿಯಾಗಲಿ!'

'ಮಾಧವ ಒಡೆಯರು ನನಗೆ ರಾಜರು. ನನ್ನ ಪ್ರಾಣವು ಅವರಿಗೆ ಸೇರಿದ್ದು. ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ ನನಗೆ ನರಕಪ್ರಾಪ್ತಿಯಾಗಲಿ!'

ಬೈರಾಗಿ ತನ್ನ ಪಕ್ಕದಲ್ಲಿ ಕುಳಿತಿದ್ದ ಇಬ್ಬರು ಯುವಕರನ್ನು ತೋರಿಸಿದ. 'ಇವರ ಪೈಕಿ ನಿನ್ನ ಮನಸ್ಸಿಗೆ ಬಂದ ಒಬ್ಬರನ್ನು ಆರಿಸಿಕೋ.'

ಗೋಪಾಲ ನೋಡಿದ. ಬಲಗಡೆ ಕುಳಿತಿದ್ದ ಹುಡುಗ ತನ್ನ ಜೊತೆಗಿರಬಹುದೆಂದು ತೋರಿತು. ಅವನನ್ನು ತೋರಿಸಿದ. 'ಕೇಶವ, ಮೇಲಕ್ಕೇಳು.' ಎಂದ ಬೈರಾಗಿ. ಕೇಶವನು ಎದ್ದ. ಅವನನ್ನು ಗೋಪಾಲನ ಹತ್ತಿರಕ್ಕೆ ಕರೆದುಕೊಂಡು ಬಂದ. ಅವನ ಬಲಗೈಯನ್ನು ತೆಗೆದು ತನ್ನ ಹರಿತವಾದ ಚೂರಿಯಿಂದ ಗೀರಿಸಿದ. ರಕ್ತವು ಚಿಮ್ಮಿತು. ಗೋಪಾಲನ ಬಲಗೈಗೂ ಹಾಗೇ ಮಾಡಿದ. ಇಬ್ಬರ ಕೈಯನ್ನೂ ಒತ್ತಿ ಬಟ್ಟೆಯಿಂದ ಬಿಗಿದ. 'ಇಂದಿನಿಂದ ನೀವಿಬ್ಬರೂ ಅಣ್ಣತಮ್ಮಂದಿರು—ಗೋಪಾಲ ಕೇಶವ ಒಬ್ಬರ ಪ್ರಾಣವನ್ನು ಮತ್ತೊಬ್ಬರು ಕಾಪಾಡಬೇಕು. ಯಾರೊಬ್ಬರ ಸುಖದುಃಖಗಳೂ ಇಬ್ಬರಿಗೂ ಸೇರಿದ್ದು. ಇದನ್ನು ನೀವು ಒಪ್ಪಿಕೊಳ್ಳಿ.'

'ಒಪ್ಪಿದ್ದೇವೆ.'

'ಸರಿ, ನೀವು ಮಾಡತಕ್ಕ ಕೆಲಸವನ್ನು ಹೇಳುತ್ತೇನೆ, ಕೇಳಿರಿ. ೧. ಈ ಊರಲ್ಲಿರುವ ಸಾಹುಕಾರರ ಹೆಸರುಗಳನ್ನೂ ವಿಳಾಸಗಳನ್ನೂ ಬರೆದುಕೊಳ್ಳಬೇಕು. ೨. ಅವರಲ್ಲಿರುವ ಆಂಗವೈಕಲ್ಯಾದಿಗಳನ್ನು ಗುರ್ತು ಹಾಕಿಕೊಳ್ಳಬೇಕು. ೩. ಪ್ರತಿಯೊಬ್ಬರ ಆದಾಯ ವೆಚ್ಚ ಅಂದಾಜನ್ನು ಹಾಕಿಕೊಳ್ಳಬೇಕು. ನಾಲ್ಕು ಜನರನ್ನು ಕೇಳಿ ಕೂಡ ಇದನ್ನು ತಯಾರಿಸಬಹುದು. ೪. ಅವರ ಮನೆತನದ ಸಂಕ್ಷೇಪಚರಿತ್ರೆ—ಕೈಲಾದಷ್ಟು ಮಟ್ಟಿಗೆ ಜಾಗ್ರತೆಯಾಗಿ ಈ ಕೆಲಸ ಮಾಡಬೇಕು. ನಿಮಗೆ ಎಷ್ಟು ಹಣವನ್ನು ಬೇಕಾದರೂ ನೇಮಿ-

ಚಂದ್ರಪಂಡಿತನು ಒದಗಿಸುತ್ತಾನೆ. ಒಂದೇ ಸಲ ಸ್ವಲ್ಪ ಹೆಚ್ಚಾಗಿ ಹಣವನ್ನು ತೆಗೆದುಕೊಂಡು ಬ್ಯಾಂಕಿನಲ್ಲಿ ನಿಮ್ಮ ಲೆಕ್ಕ ತೆರೆದು ಈ ಕೆಲಸವನ್ನು ಮಾಡಿ ಕೊಳ್ಳತಕ್ಕದ್ದು. ಏನನ್ನುವಿರಿ?'

'ಆಗಲಿ. ಮಾಡುತ್ತೇವೆ. ಆದರೆ ಇದನ್ನು ಜನರ ಕೆಟ್ಟದ್ದಕ್ಕಾಗಿ ಉಪ ಯೋಗಿಸಬಾರದೆಂದು ಬೇಡುತ್ತೇವೆ.' ಎಂದ ಗೋಪಾಲ.

'ನಾನು ಈ ಕೆಲಸ ಮಾಡುತ್ತಿರುವುದು ಜನರ ಮೇಲ್ಮೆಗಾಗಿ. ನಾನು ಬೈರಾಗಿ. ನನಗೆ ಏನೂ ಬೇಕಾಗಿಲ್ಲ. ನನ್ನಂತೆ ಇರಲು ನೀವು ಕಲಿಯಬೇಕಾ ದರೆ ವರ್ಷಗಳ ಅನುಭವ ಬೇಕು. ಆ ವಿಚಾರದಲ್ಲಿ ನೀವು ಧೈರ್ಯವಾಗಿ ಕೆಲಸ ಮಾಡಿರಿ. ನಮಗೆ ವೈರಿ ಜನರಲ್ಲ; ಈಗಿರುವ ಸರಕಾರ ಅಷ್ಟೇ. ಅದು ಮಾಡು ತ್ತಿರುವ ಅನ್ಯಾಯಗಳಿಂದ ಜನರಿಗೆ ತೊಂದರೆ ಬಹಳವಾಗಿದೆ. ಈ ತೊಂದರೆ ಯನ್ನು ನಿವಾರಣೆ ಮಾಡಿ ನಿಜವಾದ ರಾಜನಿಗೆ ಸಿಂಹಾಸನವನ್ನು ಕೊಡು ವುದೇ ನಮ್ಮ ಕೆಲಸ.'

ಇಬ್ಬರೂ ನಮಸ್ಕಾರ ಮಾಡಿದರು. 'ನಿಮ್ಮ ಆಶೀರ್ವಾದವನು ಕೊಡಬೇಕು.' ಎಂದ ಗೋಪಾಲ.

'ಹೋಗಿಬಾ. ಬಹಳ ಸಂತೋಷ.' ಎಂದ ಬೈರಾಗಿ.

ಅವರು ಅಲ್ಲಿಂದ ಹೊರಟುಹೋದರು. ನೇಮಿಚಂದ್ರಪಂಡಿತ ಹೇಳಿದ. 'ಇನ್ನೇನು ನಮ್ಮ ನಾವಿಕರು ಬರುವ ಹೊತ್ತಾಯಿತು' ಎಂದು.

'ಎಲ್ಲವೂ ತಯಾರಾಗಿರಬಹುದು. ನಾವು ಈ ದಿನವೇ ತಗರಕ್ಕೆ ಹೊರಟು ಅಲ್ಲಿಯ ಕೆಲಸ ಮುಗಿಸಿಕೊಂಡು ಬೆಳಿಗ್ಗೆ ಬರಬಹುದಲ್ಲ.'

'ಅದೇ ನಾನೂ ಅಂದುಕೊಂಡಿದ್ದು. ಅದಕ್ಕಾಗಿಯೇ ಅವರಿಗೆ ಎಲ್ಲ ವನ್ನೂ ಸಿದ್ಧಪಡಿಸಿಕೊಂಡು ಬಂದು ಹೇಳಬೇಕೆಂದು ಅಂದೆ.'

'ಅವರು ಅಷ್ಟು ಬುದ್ಧಿವಂತರಲ್ಲ. ಏನಾದರೂ ಬಾಯಿಬಿಟ್ಟಿದ್ದರೆ ಕಷ್ಟ!'

'ಅವರು ಒಳ್ಳೇ ನಾವಿಕರು. ಈ ಭಾಗದ ಸಮುದ್ರವನ್ನು ಚೆನ್ನಾಗಿ ಬಲ್ಲವರು. ಅವರ ಬೆಂಬಲದಿಂದ ನಾವು ಬೇಕಾದ ಕೆಲಸವನ್ನು ಮಾಡ ಬಹುದು.'

'ಘಾಟೋ ಬಂದ ಹಾಗಿದೆ. ಅವರೇ ಇರಬೇಕು.'

ಬಾಗಿಲು ತೆರೆಯಿತು. ಇಬ್ಬರು ನಾವಿಕರು ಒಳಕ್ಕೆ ಬಂದರು. ಪಂಡಿತ ರನ್ನೂ ಬೈರಾಗಿಯನ್ನೂ ನೋಡಿ ನಮಸ್ಕಾರ ಮಾಡಿದರು.

'ಏನು, ಎಲ್ಲಾ ತಯಾರಾಗಿದೆಯೊ?'

'ತಯಾರಾಗಿದೆ, ಆದರೆ ಸ್ವಾಮಿ....'

'ಏನು ಆದರೆ?'

'ನಮ್ಮ ಹಿರೇರು ಹೇಳ್ತಾ ಇದ್ದರು. ಎದುರಿಗಿರೋ ಬೆಟ್ಟದ ಮೇಲೆ ನಕ್ಷತ್ರ ಬಿದ್ದರೆ ಆವತ್ತು ಹಡಗೋಲು ಸಮುದ್ರದ ಮೇಲೆ ಬಿಡಬ್ಯಾಡ ಅಂತ.'

'ಅಂದರೆ?'

'ಇವತ್ತು ಬಿತ್ತು ಸ್ವಾಮಿ ನಕ್ಷತ್ರ! ನನ್ನೊಡೆಯ ಹೇಳ್ತೀನಿ, ಇವತ್ತು ಹೊರಟ ಹಡಗೋಲು ಹಿಂದಕ್ಕೆ ಬರೋದಿಲ್ಲ!'

ಬೈರಾಗಿ ಆಲೋಚನೆ ಮಾಡಿದ.

'ಹಿಂದೆ ಹಾಗೇನಾದರೂ ಆಗಿದೆಯೆ?' ಅಂದ.

'ಹೌದು ನನ್ನೊಡೆಯ, ಆಗಿದೆ. ನನ್ನ ತಮ್ಮ ಓದೋನು ಇಂದಕ್ಕೆ ಬರಲಿಲ್ಲ!'

ಜೊತೆಗೆ ಬಂದಿದ್ದೋನು ಅಂದ--'ನಾನಿದೇ ಮಾತೇ ದೊರೆಗಳ ದೋಣಿಯೋರಿಗೆ ಅಂದೆವು. ಅವರು ನಕ್ಕುಬಿಟ್ಟರು. ಇವತ್ತು ಬೆಳದಿಂಗಳ್ತು ಚೆನ್ನಾಗಿದೆ. ದೊರೆಗಳು ಏನೋ ಆಟ ಆಡೋದಕ್ಕೆ ದೋಣೀ ಒಳಗೆ ಓಗಾರಂತೆ! ಬ್ಯಾಡ ಅಂದರೆ ಅವರು ಕೇಳ್ತಾರೆ ನನ್ನೊಡೆಯ!'

ಬೈರಾಗಿ ಹೇಳಿದ, 'ಸರಿ ಇವತ್ತು ಬೇಡ. ನಾಳೇ ರಾತ್ರಿ ಆಗಲಿ. ಹೋಗಿ.'

ಅವರು ಹೊರಟುಹೋದರು. ನೇಮಿಚಂದ್ರಪಂಡಿತ 'ಇವತ್ತೇ ಹೋಗಿದ್ದರೆ ಚೆನ್ನಾಗಿತ್ತೇನೋ!' ಎಂದ.

'ನಾವಿಕರ ಮನಸ್ಸು ಸರಿಯಾಗಿಲ್ಲದೆ ಇದ್ದಾಗ ಪ್ರಯಾಣ ಮಾಡುವುದು ತಪ್ಪು. ಅಲ್ಲದೆ ದೊರೆ ಬೇರೆ ಹೋಗುತ್ತಿದ್ದಾನೆ ಅಂದರೆ— ಈಗ ಸಂಶಯ

ಎಲ್ಲಾರ ಮೇಲೂ ಇದೆ. ನಮ್ಮನ್ನು ಒಂದು ವೇಳೆ ಹಿಡಿದು ತೊಂದರೆಪಡಿಸಿದರೂ ಅವರು ಪಡಿಸಬಹುದು. ಅದಕ್ಕಾಗಿ ಇವತ್ತು ಹೋಗದೆ ಬಿಟ್ಟದ್ದೇವಾಸಿ.'

'ನಿಮ್ಮ ಮನಸ್ಸು ಏನನ್ನುತ್ತೆ?' ಎಂದ ನೇಮಿಚಂದ್ರ ಪಂಡಿತ.

'ಇವತ್ತು ಹೋಗದೆ ಇರೋದೇ ವಾಸಿ ಎಂದಿತು. ಅದಕ್ಕೆ ಬೇಡ ಎಂದು ಬಿಟ್ಟೆ.'

'ಸರಿ. ಇನ್ನು ಅದಕ್ಕೆ ಮರುಮಾತೇ ಇಲ್ಲ. ನಿಜವಾಗಿ ನಕ್ಷತ್ರಮಹಿಮೆಯಿಂದ ಹೋದ ಹರಿಗೋಲು ಹಿಂದಕ್ಕೆ ಬರದೇ ಇದ್ದರೆ ನಾನು ಕೋಟೇ ಹನುಮಪ್ಪನಿಗೆ ನೂರು ತೆಂಗಿನಕಾಯಿ ಒಡೆಸುತ್ತೇನೆ!'

'ಆ ಹನುಮಪ್ಪ ಕಾದಿದ್ದಾನೋ ಏನೋ ನಿಮ್ಮ ನೂರು ತೆಂಗಿನಕಾಯಿಗೆ!'

'ಯಾರಿಗೆ ಗೊತ್ತು!'

## ೧೬

ಮಂತ್ರಿ ಹಿರಣ್ಯಯ್ಯನಿಗೆ ಮೂರು ದಿನಗಳಿಂದ ನಿದ್ದೆ ಮಾಡುವುದಕ್ಕೆ ಕೂಡ ವಿರಾಮವಿರಲಿಲ್ಲ. ದೊರೆಯಾದ ರಾಜಾರಾಯನಿಗೆ ಹುಚ್ಚುಹಿಡಿದ ಹಾಗೆ ಆಗಿತ್ತು. ಅವನ ಮನಸ್ಸಿಗೆ ಶಾಂತಿಯೇ ಇರಲಿಲ್ಲ. ಯಾರು ಏನು ಕೇಳಿದಾಗ್ಯೂ ಏನೇನೋ ಮಾತನಾಡುತ್ತಿದ್ದ. ಕೊನೆಗೆ ಆ ದೊರೆಯೊಡನೆ ಮಾತನಾಡುವುದು, ರಾಜಕಾರ್ಯವನ್ನು ನೆರವೇರಿಸುವುದು ಹಿರಣ್ಯಯ್ಯನ ಪಾಲಿಗೇ ಬಿತ್ತು. ಕೊನೆಗೆ ಆ ದಿನ ಬೆಳಗ್ಗೆ ಹೇಳಿದ ದೊರೆ ರಾಜಾರಾಯ—ತನ್ನ ಮನಶ್ಶಾಂತಿಗಾಗಿ ತಾನು ಆ ದಿನ ಸಾಯಂಕಾಲವೇ ಸಮುದ್ರದ ಮೇಲೆ ಹೋಗಬೇಕೆಂದು. ಬೆಳದಿಂಗಳು ಚೆನ್ನಾಗಿ ಬರುವಂತಿತ್ತು. ಹಿರಣ್ಯಯ್ಯ ಅದಕ್ಕೆ ಬೇಕಾದ ಸಲಕರಣೆಗಳನ್ನೆಲ್ಲಾ ಒದಗಿಸಿ ಮನೆಗೆ ಆಗ ತಾನೆ ಬಂದಿದ್ದ. ತನ್ನ ಸುಖಾಸನದಲ್ಲಿ ಕುಳಿತನೋ ಇಲ್ಲವೋ ಎನ್ನುವ ಹೊತ್ತಿಗೆ ಬಾಗಿಲಲ್ಲಿ ಶಬ್ದ ಕೇಳಿಸಿತು.

'ಒಳಕ್ಕೆ ಬರಬಹುದೇ?' ಎಂತ.

'ಯಾರು ಬೇಡ ಅಂದೋರು!' ಎಂದ.

'ಅದೇತಕ್ಕೆ ಇಷ್ಟು ಕೋಪವಾಗಿ ಮಾತನಾಡುತ್ತೀರಿ! ಇಷ್ಟವಿದ್ದರೆ ಬಾ ಎನ್ನಬೇಕು, ಇಲ್ಲದಿದ್ದರೆ ಬೇಡ ಎನ್ನಬೇಕು.' ಎಂದಳು ಮಾಯಾಬಾಯಿ.

'ನನಗೆ ಮನಸ್ಸು ಸರಿಯಾಗಿಲ್ಲ. ಅಲ್ಲಿ ದೊರೆ ಕೆಲಸ! ಅವನಿಗೋ ಹುಚ್ಚುಹಿಡಿದ ಹಾಗಿದೆ!'

'ಹೌದು. ಇಲ್ಲಿ ನನ್ನ ಕೆಲಸ. ನಿಮಗೆ ಸುಮ್ಮನೆ ಕೆಲಸ ಹೇಳುತ್ತಿದ್ದೇನೆ!' ಎನ್ನುತ್ತ ಮಾಯಾಬಾಯಿ ಒಳಕ್ಕೆ ಬಂದು ಎದುರಿಗೆ ಕುಳಿತಳು.

ಮಂತ್ರಿ ಮಾತನಾಡಲಿಲ್ಲ. ತನ್ನ ಕಣ್ಣು ಮುಚ್ಚಿಕೊಂಡು ಕುಳಿತ.

'ಏತಕ್ಕೆ, ನನ್ನ ನೋಡೋದಕ್ಕೆ ಕೂಡ ನಿಮಗೆ ಇಷ್ಟವಿಲ್ಲವೆ?'

'ಇಷ್ಟವಿಲ್ಲ ಎಂದಲ್ಲ! ನನಗೆ ಸಾಕಾಗಿ ಹೋಗಿದೆ.'

ಈ ಸಮಯದಲ್ಲಿ ಉಪಚಾರಮಾಡಿದರೆ ತನ್ನ ಕೆಲಸ ಕೈಗೂಡುತ್ತೆಂದು ತಿಳಿದು, ಮೇಜಿನ ಮೇಲಿದ್ದ ಬಣ್ಣದ ಬೀಸಣಿಕೆಯನ್ನು ತೆಗೆದುಕೊಂಡು ಗಂಡನಿಗೆ ಬೀಸಿದಳು.

'ಚಾ ತೆಗೆದುಕೊಂಡು ಬಾ ಎಂತ ಹೇಳಿದ್ದೇನೆ' ಅಂದಳು.

ಮಂತ್ರಿ ಹಾಗೆಯೆ ಕಣ್ಣುಮುಚ್ಚಿಕೊಂಡು ಕುಳಿತಿದ್ದ. ಅವಳೂ ಸ್ವಲ್ಪ ಹೊತ್ತು ಬೀಸಿದಳು. ಆಮೇಲೆ ಬೀಸುವುದನ್ನು ನಿಲ್ಲಿಸಿ 'ಈ ದಿನ ಸಮುದ್ರದ ಮೇಲೆ ನೀವೇತಕ್ಕೆ ಹೋಗಲಿಲ್ಲ?' ಎಂದು ಕೇಳಿದಳು.

ಮಂತ್ರಿ ಕಣ್ಣುಮುಚ್ಚಿಕೊಂಡೇ ಉತ್ತರ ಕೊಟ್ಟ. 'ನನಗೆ ಮನಸ್ಸು ಸರಿಯಾಗಿಲ್ಲ. ಹೋಗಬೇಕೆಂದಿದ್ದೋನು ಇಲ್ಲಿಗೆ ಬಂದೆ.'

'ಒಳ್ಳೆಯ ಕೆಲಸವಾಯಿತು.'

'ಅಂದರೆ?'

'ಇವತ್ತು ಮಾಧವ ಒಡೆಯ ಖಂಡಿತವಾಗಿ ಮನೆಗೆ ಬರುವಂತೆ ಕಾಣುತ್ತೆ.'

'ನಿನಗೆ ಹೇಗೆ ಗೊತ್ತು?'

'ನನಗೆ ಹಾಗೆ ತೋರುತ್ತಿದೆ ನೀವೂ ಹೋಗುತ್ತೇನೆಂದು ಹೇಳಿ, ಊರೊಳಕ್ಕೆ ಹೋಗಿ ಬಂದರೆ, ಇಬ್ಬರೂ ಸಿಕ್ಕಿಬಿದ್ದರೂ ಬೀಳಬಹುದು'

ಹಿರಣ್ಯಯ್ಯ ಕಣ್ಣು ಬಿಟ್ಟ 'ಒಳ್ಳೇ ಉಪಾಯ!'

ಅಷ್ಟು ಹೊತ್ತಿಗೆ ಅಡಿಗೆಯವನು ಚಾ ತಂದಿಟ್ಟ. ಮಾಯಾಬಾಯಿ ಗಟ್ಟಿಯಾಗಿ ಹೇಳಿದಳು. 'ಈ ದಿನ ಮಂತ್ರಿಯವರೂ ಸಮುದ್ರದ ಮೇಲೆ ಹೋಗುತ್ತಾರೆ. ಇನ್ನು ಅರ್ಧ ಗಂಟೆಯೊಳಗಾಗಿ ಊಟಕ್ಕೆ ತಯಾರಾಗಲಿ' ಎಂದು. ಅಡಿಗೆಯವನು 'ಅಪ್ಪಣೆ' ಎಂದು ಹೊರಟುಹೋದ.

'ಇದು ಇನ್ನೆರಡು ನಿಮಿಷದೊಳಗಾಗಿ ಮನೆಯಲ್ಲಿ ಎಲ್ಲರಿಗೂ ತಿಳಿಯುತ್ತೆ'. ಎಂದಳು ಮಾಯಾದೇವಿ.

ಮಂತ್ರಿ ಮಾತನಾಡದೆ ಸುಮ್ಮನಿದ್ದ. ಮಾಯಾಬಾಯಿ ಹೇಳಿದ ಮಾತು ಸುಳ್ಳಾಗಲಿಲ್ಲ ಚಿತ್ರಾಬಾಯಿಗೂ ತಿಳಿಯಿತು, ಮಂತ್ರಿಗಳು ಸಮುದ್ರದ ಮೇಲೆ ದೊರೆಯೊಡನೆ ಹೋಗುತ್ತಾರೆಂದು.

## ೧೭

ಲೀಲಾಬಾಯಿಗೆ ಆಗ ತಾನೆ ವೀಣಾ ಪಾಠವು ಮುಗಿದಿತ್ತು. ಹೇಳಿಕೊಡುವಾತನು ಹೊರಟುಹೋದ ಮೇಲೂ ಲೀಲಾ ತನಗೆ ಹಿಂದೆ ಪಾಠವಾಗಿದ್ದ 'ಮಾಜಾನಕಿ'ಯನ್ನು ಹಿಡಿದು ಕುಳಿತಿದ್ದಳು. ಅದರಲ್ಲೇ ಅವಳ ಮನಸ್ಸು ಲೀನವಾಗಿತ್ತು. ಕಣ್ಣು ಬಿಟ್ಟು ನೋಡುತ್ತಿದ್ದರೂ ಆ ಕೋಣೆಯೊಳಕ್ಕೆ ಪುರುಷನೊಬ್ಬನು ಬಂದಿದ್ದು ಅವಳಿಗೆ ತಿಳಿಯದೆಹೋಯಿತು. ಬಂದಾತನೂ ಅವಳನ್ನು ಕರೆಯಲಿಲ್ಲ; ಅವಳ ಆ ಪ್ರಪಂಚವನ್ನು ಕೆಡಿಸಲಿಲ್ಲ

ಒಳಕ್ಕೆ ಹೋಗಿದ್ದ ಚಿತ್ರಾಬಾಯಿ ತನ್ನ ತಾಯಿಯಾದ ಶ್ಯಾಮಲಾಬಾಯಿಯೊಡನೆ ಈಚೆಗೆ ಬಂದಳು. ಲೀಲಾ ವೀಣೆಯನ್ನು ಬಾರಿಸುತ್ತಿದ್ದಳು. ಬಂದಿದ್ದ ವ್ಯಕ್ತಿ ಅಲ್ಲೇ ಒಂದು ಕಡೆ ಕೇಳುತ್ತ ನಿಂತಿದ್ದ.

'ಕೂತುಕೊಳ್ಳಿ. ಏನೇ ಲೀಲಾ!' ಎಂದಳು ಚಿತ್ರಾಬಾಯಿ.

ಲಿಲಾ ಬಾರಿಸುತ್ತಿದ್ದುದನ್ನು ನಿಲ್ಲಿಸಿ ನೋಡಿದಳು. ಎದುರಿಗೆ ಮಾಧವ ಒಡೆಯರು ನಿಂತಿದ್ದರು. ಲೀಲಾ ಏನೂ ಮಾತಾಡಲಿಲ್ಲ. ಚಿತ್ರಾಬಾಯಿಯೆ ಮಾತನಾಡಿದಳು.

'ಇಲ್ಲ, ಅವರು ಬಂದು ನಿಂತಿದ್ದರೂ ನೀನು ಹಾಗೇ ಬಾರಿಸುತ್ತಿದ್ದೀ-ಯಲ್ಲೆ?'

'ನಾನು ನೋಡಲಿಲ್ಲ'

'ಸರಿಯೆ. ಈಗಲಾದರೂ ನೋಡು' ಎಂದಳು ಚಿತ್ರಾ. ಮಾಧವ ಒಡೆಯರ ಕಡೆ ತಿರುಗಿ 'ಕ್ಷಮಿಸಿ, ಕೂತುಕೊಳ್ಳಿ.' ಎಂದಳು. ಮಾಧವ ಒಡೆಯ ಅಲ್ಲೇ ಕುಳಿತ. ಶ್ಯಾಮಲಾಬಾಯಿ ಹೋಗಿ ಬಾಗಿಲನ್ನು ಹಾಕಿದಳು. ಅದನ್ನು ನೋಡಿ ಚಿತ್ರಾಬಾಯಿ 'ಒಳ್ಳೇ ಕೆಲಸ ಮಾಡಿದಿರಿ, ಅಮ್ಮ. ಇಲ್ಲಿ ಬರೋದ-ರಿಂದ ಅವರಿಗೆ ತೊಂದರೆಯೆ ಹೆಚ್ಚು' ಎಂದಳು ಲೀಲಾ.

'ನನಗೇನು ತೊಂದರೆ?' ಎಂದು ನಕ್ಕ ಮಾಧವ ಒಡೆಯ.

'ನಿಮಗೇನು ಸ್ವಲ್ಪವೂ ಹೆದರಿಕೆಯಿಲ್ಲವಲ್ಲ' ಎಂದಳು ಚಿತ್ರಾ.

'ತಪ್ಪು ಮಾಡುವವರಿಗೆ ಹೆದರಿಕೆ, ನನಗೇತಕ್ಕೆ!' ಎಂದ ಮಾಧವ-ಒಡೆಯ.

'ಹಾಗಲ್ಲ, ತಮ್ಮ ಮೇಲೆ ಇಲ್ಲದ ತಪ್ಪನ್ನು ಹೊರಿಸಿರುವಾಗ ತಾವು ಇಲ್ಲಿಗೆ ಬಂದರೆ ತಮಗೆ ಇನ್ನೂ ತೊಂದರೆಯಾಗುವುದೇನೋ!'

'ನನ್ನ ಮೇಲಲ್ಲ ತಪ್ಪು ಹೊರಿಸಿರುವುದು. ನನ್ನನ್ನು ಹಿಡಿದು ಶಿಕ್ಷಿಸ ಬೇಕೆಂದು ಯೋಚಿಸಿರುವರು. ಆದರೆ ತಪ್ಪನ್ನು ಹೊರಿಸಿರುವುದು ನಿಮ್ಮ ಮೇಲೆ.'

'ನನ್ನ ಮೇಲಿನ ತಪ್ಪು ನಿಲ್ಲುವುದಿಲ್ಲ ಲೀಲಾ ವಿಚಾರ ಹೇಳಿದೊಡನೆಯೆ ಮಾಯವಾಗುತ್ತೆ.'

'ನನ್ನದೂ ಅಷ್ಟೇ. ಆದರೆ ಆ ವಿಚಾರವನ್ನು ಹೇಳುವ ವರೆಗೂ ತಪ್ಪು ನಿಮ್ಮ ಮೇಲೆಯೆ ಇರುತ್ತದಲ್ಲವೆ? ಶ್ಯಾಮಲಾಬಾಯಿಯವರು ಏನನ್ನುತ್ತಾರೆ?'

'ನನ್ನದೇನಿದೆಯಪ್ಪ! ನಿಮಗೆ ಹೇಗೆ ತೋರಿದರೆ ಹಾಗೆ ಮಾಡಿ. ನನಗೆ ಅಷ್ಟರ ಮಟ್ಟಿಗೆ ಎಲ್ಲರೂ ಸುಖವಾಗಿದ್ದರೆ ಸಾಕು.'

‘ಅದಕ್ಕೇ ನಾನು ಇಲ್ಲಿಗೆ ಬಂದಿದ್ದು. ನೀವು ಈ ಮದುವೆಗೆ ಒಪ್ಪುವುದಾದರೆ ನಾನು ನಿಜಸ್ಥಿತಿಯನ್ನು ಹೇಳಬೇಕೆಂದಿದ್ದೇನೆ. ಅಲ್ಲದೆ....’

‘ಹೇಳಿ’ ಎಂದಳು ಚಿತ್ರಾ.

‘ಹೇಳಲೆ?’ಎಂದು ಮಾಧವ ಒಡೆಯು ಲೀಲಾಬಾಯಿಯ ಕಡೆ ನೋಡಿದ.

‘ಹೇಳಿ’ ಎಂದಳು ಲೀಲಾ.

‘ನನಗೆ ಒಂದು ಹೊಸ ಸಮಾಚಾರ ತಿಳಿದಿದೆ. ಲೀಲಾನ ಈಗಿನ ರಾಜರಿಗೆ ಕೊಟ್ಟು ವಿವಾಹವನ್ನು ಮಾಡಲು ನಮ್ಮ ಮಂತ್ರಿಗಳು ಒಪ್ಪಿರುವರಂತೆ!’

‘ನಿಜವಲ್ಲ!’

‘ಶುದ್ಧ ಸುಳ್ಳು’ ಎಂದಳು ಶ್ಯಾಮಲಾಬಾಯಿ.

‘ಊರೆಲ್ಲಾ ಈ ಸುದ್ದಿ ಹುಟ್ಟಿದೆ. ಯಾರೋ ಸಾಮುದ್ರಿಕಶಾಸ್ತ್ರದವನು ಬಂದಿದ್ದನಂತೆ.’

‘ಹೌದು.’

‘ಅವನು ಕೈನೋಡಿ ಹೇಳಿದನಂತೆ.’

‘ಕೈಹಿಡಿಯುವವನು ಚಕ್ರವರ್ತಿಯಾಗುತ್ತಾನೆ ಎಂದು ’

‘ಅದಕ್ಕೆ ಮಂತ್ರಿಗಳು ರಾಜರಿಗೇ ಕೊಡಲು ಒಪ್ಪಿರುವರಂತೆ.’

‘ಅದೆಂದಿಗೂ ಆಗಲಾರದು.’ ಎಂದಳು ಶ್ಯಾಮಲಾಬಾಯಿ.

‘ನಾನೇನು ಆಟದ ಬೊಂಬೆಯೆ, ಯಾರಿಗಂದರೆ ಅವರಿಗೆ ನನ್ನನ್ನು ತೆತ್ತು, ಅದರಿಂದ ಉಪಯೋಗವನ್ನು ಹೊಂದಲು?’ ಎಂದಳು ಲೀಲಾ.

‘ಏನೋ ಇದರಲ್ಲಿ ಸ್ವಾರಸ್ಯವಿರಬೇಕು. ಇಲ್ಲದಿದ್ದರೆ ಊರೆಲ್ಲ ಹೀಗೆ ಕೂಗುತ್ತಿದ್ದರೆ?’ ಎಂದಳು ಚಿತ್ರಾ.

‘ಏನಾದರೂ ಆಗಲಿ. ಮಂತ್ರಿಗಳಿಗೆ ನಮ್ಮ ಮೇಲೆ ಯಾವ ಅಧಿಕಾರವೂ ಇಲ್ಲ ’ ಎಂದಳು ಶ್ಯಾಮಲಾ.

‘ನಿಮ್ಮ ಅಳಿಯಂದಿರು ಅವರು ’

‘ಇರಬಹುದು. ಅವರ ಅಧಿಕಾರ ಆ ಚಿತ್ರಗಳ ಮೇಲೆ; ಲೀಲಾ ಮೇಲಾಗಲಿ ನನ್ನ ಮೇಲಾಗಲಿ ಇಲ್ಲ.’

‘ಒಂದು ವೇಳೆ ದೊರೆಗಳೇ ಹೇಳಿಕಳಿಸಿ ಕೇಳಿದರೆ?’

‘ಅವರಿಗೂ ನಮ್ಮ ಮೇಲೆ ಅಧಿಕಾರವಿಲ್ಲ. ಮಾಧವ ಒಡೆಯರೆ, ತಮಗೆ ಲೀಲಾ ಸೇರಿದವಳು. ತಮಗೆ ಬರಬೇಕಾದ ರಾಜ್ಯವನ್ನು ಆ ದೊರೆ ಮೋಸದಿಂದ ತೆಗೆದುಕೊಂಡ. ಆ ದೊರೆಯ ಆಳುಗಳು ನಾವಲ್ಲ ಈಗಲಾದರೂ ಮೋಸದಿಂದ, ನಿಮಗೆ ಸೇರಬೇಕಾದ ಸ್ತ್ರೀಯನ್ನು ಅವನು ತೆಗೆದುಕೊಳ್ಳದಂತೆ ನೋಡಿಕೊಳ್ಳಿ.’

‘ಇದೇನು ವಿಪರೀತ!’

‘ಹೌದು. ನಾವು ನಿಮ್ಮ ತಾತಂದಿರ ಸೇವಕರು. ಅವರ ಪ್ರಜೆಗಳು. ನಿಮಗೆ ಸೇರತಕ್ಕವರು, ರಾಜಾರಾಯನಿಗಲ್ಲ.’

‘ರಾಜಾರಾಯ ನಮ್ಮ ತಾತನಿಂದಲೇ ಈ ರಾಜ್ಯವನ್ನು ಪಡೆದ.’

‘ಪಡೆಯಲಿಲ್ಲ, ಹೊಡೆದ. ಮೋಸದಿಂದ ತೆಗೆದುಕೊಂಡ.’

‘ನಿಮಗೆ ಇದನ್ನು ತಿಳಿಸಿದವರು ಯಾರು?’ ಶ್ಯಾಮಲಾದೇವಿ ಸುಮ್ಮನಿದ್ದಳು. ‘ಇಲ್ಲ ತಾಯಿ, ನನಗೆ ಹೇಳಬೇಕು. ಇದನ್ನು ತಿಳಿದ ಹೊರತು ನನಗೆ ಶಾಂತಿ ಇಲ್ಲ ಹೇಳಿದವರು ಯಾರು ತಾಯಿ?’ ಅಂದ ಮಾಧವ ಒಡೆಯ.

‘ಬೈರಾಗಿ’ ಎಂದಳು ಶ್ಯಾಮಲಾ.

‘ಆತನನ್ನು ನಂಬುತ್ತೀರಾ?’

‘ನಾನು ನಂಬದೆ ಮತ್ತಾರು ಅವನ ಮಾತನ್ನು ನಂಬುವರು!’ ಎಂದಳು ಶ್ಯಾಮಲಾ.

‘ಅಂದರೆ, ನಿಮಗೂ ಆತನಿಗೂ ಸಂಬಂಧವುಂಟೆ?’

‘ಉಂಟು.’

‘ಏನು ಅಂತಹ ಸಂಬಂಧ?’

‘ಅವನು ನನ್ನ ದೊಡ್ಡ ಮಗ.’

ಮಾಧವ ಒಡೆಯ ಯೋಚನೆ ಮಾಡಿದ. 'ನೀವು ಆಲೋಚನೆಮಾಡುವ ಸಂದರ್ಭವಿಲ್ಲ. ನಿಮ್ಮ ಮನಸ್ಸಿನಂತೆ ನಡೆದುಕೊಳ್ಳಬೇಕೆಂದು ಕೇಳಿದೆ.' ಎಂದ ಮಾಧವ ಒಡೆಯ.

ಅಷ್ಟು ಹೊತ್ತಿಗೆ ಹೊರಗಿದ್ದ ಆಳು ಗಟ್ಟಿಯಾಗಿ 'ಮಂತ್ರಿಗಳ ಸವಾರಿ ಹೀಗೇ ಬರುತ್ತಿದೆ. ಬಾಗಿಲು ತೆಗೆಯಿರಿ' ಎಂದ.

ಚಿತ್ರಾಬಾಯಿಗೆ ದಿಕ್ಕುತೋಚದಂತಾಗಿ ಮೆಲ್ಲನೆ ಮಾಧವ ಒಡೆಯರ ಬಳಿಗೆ ಬಂದು 'ನೀವು ಇಲ್ಲೇ ಈ ಪರದೆಯ ಹಿಂದೆ ಹೋಗಿ' ಎಂದಳು.

'ಅಲ್ಲ, ಬಂದರೆ ಬರಲಿ.' ಎಂದ ಮಾಧವ ಒಡೆಯ.

'ನನ್ನಾಣೆ, ಹೀಗೆ ಬನ್ನಿ' ಎಂದಳು ಲೀಲಾ. ಯತ್ನವಿಲ್ಲದೆ ಮಾಧವ ಒಡೆಯ ಪರದೆಯ ಹಿಂದೆ ಹೋದ.

ಚಿತ್ರಾಬಾಯಿಯೇ ಹೋಗಿ ಬಾಗಿಲನ್ನು ತೆಗೆದಳು. ಮಂತ್ರಿ ನಿಧಾನವಾಗಿ ಒಳಕ್ಕೆ ಬಂದ. ಶ್ಯಾಮಲಾಬಾಯಿಯನ್ನು ನೋಡಿ ನಮಸ್ಕರಿಸಿದ. ಎದುರಿಗಿದ್ದ ಸುಖಾಸನದ ಮೇಲೆ ಕುಳಿತ.

'ಯಾಕೆ ಮುಖ ಸಪ್ಪಗಿದೆ?' ಎಂದಳು ಚಿತ್ರಾ.

'ನನಗೆ ಮೈಯಲ್ಲಿ ಚೆನ್ನಾಗಿಲ್ಲ.'

'ಮನಸ್ಸು?'

'ಅದೂ ಚೆನ್ನಾಗಿಲ್ಲ.'

'ಇಲ್ಲೇ ಹಾಸಿಗೆ ಹಾಸಿ ಕೊಡಲೆ?'

'ಈಗ ಬೇಡ.'

ಆಗಲಿ ಎಂದಿದ್ದರೆ ಅಳಿಯನ ಕುರುಡು ಬೆಳಗಾಗುತ್ತಿತ್ತು. ಆ ತೆರೆಯನ್ನು ತೆಗೆಯಬೇಕಾಗುತ್ತಿತ್ತು. ಮಾಧವ ಒಡೆಯನ ದರ್ಶನ ಮಂತ್ರಿಗೆ ಆಗುತ್ತಿತ್ತು.

'ಹೌದು, ಇಂತಹ ದೇಹಸ್ಥಿತಿಯಲ್ಲಿಯೂ ಸಮುದ್ರದ ಮೇಲೆ ಹೋಗಬೇಕೆ?' ಎಂದಳು ಚಿತ್ರಾ.

'ಎಲ್ಲಾದರೂ ಉಂಟೆ?' ಎಂದಳು ಲೀಲಾ.

ಮಂತ್ರಿಗೆ ಮನಸ್ಸು ಸ್ವಲ್ಪ ಸಮಾಧಾನವಾದಂತಾಯಿತು. ನಿಜವಾಗಿಯೂ ಇವರಿಗೆ ಮಂತ್ರಿಯು ಚಿಕ್ಕ ಮನೆಯಿಂದಾಚೆಗೆ ಹೋಗಬೇಕೆಂದು ಮನಸ್ಸಿನಲ್ಲಿದ್ದರೆ ಈ ಮಾತುಗಳನ್ನು ಅವರು ಆಡುತ್ತಿರಲಿಲ್ಲವೆಂದು ಅವನಿಗೆ ತೋರಿತು.

'ಅಲ್ಲ, ಈಚೆಗೆ ದೊರೆಗಳ ಮನಸ್ಸೇ ಒಂದು ರೀತಿಯಾಗಿಬಿಟ್ಟಿದೆ.'

'ಏನು ಕಾರಣವೋ?'

'ಹೇಗೆ ಹೇಳೋದು? ಆದರೆ ಅವರು ನನ್ನ ಮೇಲೆ ಬಹಳ ಕೃಪೆ ತೋರಿಸಿದ್ದಲ್ಲದೆ, ನಿಮ್ಮ ಮೇಲೂ ದಯೆಯನ್ನು ತೋರಿಸಿದ್ದಾರೆ.'

'ಅಂದರೆ?'

'ಅಂದರೆ—ನಮ್ಮ ಲೀಲಾ ಇದ್ದಾಳಲ್ಲ. ಅವಳನ್ನು ತಮಗೆ ಕೊಟ್ಟು ಮದುವೆ ಮಾಡಬೇಕೆಂದು ನನ್ನನ್ನು ಕೇಳಿದ್ದಾರೆ.'

'ಅದು ಹೇಗಾದೀತು?' ಎಂದಳು ಚಿತ್ರಾಬಾಯಿ.

'ಇದೇನು ಧ್ವನಿ ಹೀಗಿದೆ?'

'ಹೌದು. ಇನ್ನೂ ಸಣ್ಣ ಹುಡುಗಿ, ರಾಜರ ಅರಮನೆಗೆ ಸೇರುವಷ್ಟು ಶಕ್ತಿ ಅವಳಿಗೆ ಬಂದಿಲ್ಲ. ಅಲ್ಲದೆ....'

'ಅಲ್ಲದೆ....ಅವಳ ಇಷ್ಟ. ಬಲವಂತವಾಗಿ ಹುಡುಗಿಯರಿಗೆ ಮದುವೆ ಮಾಡುವ ಕಾಲ ಹೋಯಿತು!' ಎಂದಳು ಚಿತ್ರಾ.

'ಅಲ್ಲ, ಚಿತ್ರಾ, ಯೋಚನೆ ಮಾಡಿ ಮಾತಾಡು. ದೊರೆಗಳು ಅಂದರೆ ಏನು! ಅವರು ನಮ್ಮನ್ನ ಕೇಳೋದು ಅಂದರೇನು!'

'ಅದು ಬಹಳ ದೊಡ್ಡ ವಿಚಾರವೆ. ಆದರೆ ಇನ್ನೂ ಕೇವಲ ಹುಡುಗಿ....'

'ಅದಕ್ಕಾಗಿಯೆ ಅವಳಿಗೆ ಏನೂ ತಿಳಿಯುವುದಿಲ್ಲ. ನಾವು ದೊಡ್ಡವರು ಯೋಚನೆ ಮಾಡಿ ಎಲ್ಲಾ ಮಾಡಬೇಕಾಗಿದೆ. ಅವಳು ನಮ್ಮ ಮಾತನ್ನು ಕೇಳಿದರೆ ಮುಂದೆ ಅವಳಿಗೆ ಯಾವ ತೊಂದರೆಯೂ ಇಲ್ಲ.'

'ತೊಂದರೆ ಬರುವುದು ಅವರವರ ಅದೃಷ್ಟ. ಅದೃಷ್ಟ!

'ಅದೃಷ್ಟ! ಅಂದರೇನು? ಗಾಜಿನ ಪಾತ್ರೆಯನ್ನು ಮೇಲಕ್ಕೆ ಹಾಕಿ ಒಡೆದರೆ ಅದೃಷ್ಟ! ಅಂದರೇನು?'

'ಹಾಗುಂಟೆ? ನೀವೇ ಎಷ್ಟೋ ಸಾರಿ ಹೇಳಿದ್ದೀರಿ. ಹರಿಣಾಪಿ ಹರೇಣಾಪಿ ಅಂತ.'

'ಹೌದು. ಅದೇನೋ ಸರಿ. ಶಿವ ಕೊಟ್ಟ ಜೋಳಿಗೆ ಅಂತ ಗೂಟಕ್ಕೆ ತಗಲು ಹಾಕಿದರೆ ಹೊಟ್ಟೆ ತುಂಬುತ್ತೆಯೆ? ಪುರುಷಪ್ರಯತ್ನವೂ ಬೇಕು.'

'ಇದರಲ್ಲೆಲ್ಲಾ ಪುರುಷಪ್ರಯತ್ನ ಕೆಲಸಕ್ಕೆ ಬರೋ ಹಾಗೆ ತೋರಲಿಲ್ಲ. ಅವರವರ ಕಂಕಣಪ್ರಾಪ್ತಿ ಅವರವರಿಗೆ. ನಿಮಗೆ ಸುಮ್ಮನೆ ಆಯಾಸವಾಗುತ್ತಿದೆ, ಅಷ್ಟೆ.'

'ಇರಲಿ, ಮಾತೋಶ್ರೀಯವರ ಅಭಿಪ್ರಾಯವೇನಿದೆ?'

'ನನ್ನ ಅಭಿಪ್ರಾಯವೇನಿದೆ? ನಾನು ಇವತ್ತೋ ನಾಳೆಯೋ ಅಂತ ಕಾದಿದ್ದೇನೆ. ನೀವೆಲ್ಲ ಸುಖವಾಗಿರುವುದೇ ನನಗೆ ಬೇಕಾದದ್ದು' ಎಂದಳು ಶ್ಯಾಮಲಾಬಾಯಿ.

'ಹಾಗಾದರೆ ದೊರೆಗಳಿಗೆ ಲೀಲಾನನ್ನು ಕೊಟ್ಟು ಮದುವೆ ಮಾಡಿದರೆ ನಿಮ್ಮ ಅಭ್ಯಂತರವೇನೂ ಇಲ್ಲವಲ್ಲ?'

'ಅವಳ ಇಷ್ಟವೆ ನನ್ನ ಇಷ್ಟ; ಅವಳಿಗೆ ಬೇಕಾಗಿದ್ದರೆ ಮಾಡಿಕೊಳ್ಳಬಹುದು' ಎಂದಳು ಶ್ಯಾಮಲಾ.

'ನಿನ್ನೆಯ ದಿನ ಇಲ್ಲಿಗೆ ಪಂಡಿತರು ಬಂದಿದ್ದರು' ಎಂದಳು ಚಿತ್ರಾ.

'ಯಾರು?'

'ನೇಮಿಚಂದ್ರ ಪಂಡಿತರು. ಅವರನ್ನು ತಮ್ಮ ವಿಚಾರವಾಗಿ ಕೇಳಿದೆವು. ಈಗ ಗ್ರಹಗಳು ತಮಗೆ ಬಹಳ ಕ್ರೂರವಾಗಿವೆಯಂತೆ!'

'ದೇವರು ಪಾರು ಮಾಡಬೇಕು!' ಎಂದಳು ಶ್ಯಾಮಲಾ

ಅವಳ ಮನಸ್ಸು ಓಡುತ್ತಿತ್ತು. ಹೇಗಾದರೂ ಒಂದು ಬುದ್ಧಿವಂತಿಕೆಯಿಂದ ಮಾಧವ ಒಡೆಯನನ್ನು ಮಂತ್ರಿಗೆ ತಿಳಿಯದೆ ಆಚೆ ಕಳಿಸಬೇಕೆಂದು ಈ ಸಮಯದಲ್ಲಿ ಅವಳ ಬುದ್ಧಿಗೆ ಹೊಳೆಯಿತು.

'ಅದೆಲ್ಲಾ ಸುಳ್ಳು! ಬ್ರಾಹ್ಮಣರು ತಮ್ಮ ಅನುಕೂಲಕ್ಕಾಗಿ ಮಾಡಿಕೊಂಡಿರುವ ಒಂದು ಕಂಟುಪಾಯ, ಈ ಗ್ರಹಗಿಹ ಎಲ್ಲಾ!'

'ಅಂದರೆ ಅದರಲ್ಲಿ ನಿಮಗೇ ನಂಬಿಕೆಯಿಲ್ಲ ಎಂದಾಯಿತಲ್ಲ!' ಎಂದಳು ಚಿತ್ರಾ.

'ನಂಬಿಕೆಯಂತೆ! ಎಲ್ಲಿ ಬರಬೇಕು! ಶಾಸ್ತ್ರಸಮ್ಮತವಾಗಿದ್ದರೆ, ವಿಜ್ಞಾನದಿಂದ ಅದನ್ನು ದೃಢಪಡಿಸಿಕೊಂಡಾಗ ನಂಬಬಹುದು!'

'ವಿಜ್ಞಾನದಿಂದ ದೃಢಪಡಿಸಿಕೊಳ್ಳುವುದು ಅಂದರೆ ಏನು? ಹೇಗೆ?' ಎಂದಳು ಚಿತ್ರಾ

'ಯಾವುದಾದರೂ ಒಂದು ತತ್ವವನ್ನು ಸೂಚಿಸಿದರೆ, ಅದನ್ನು ಕಾರ್ಯರಂಗಕ್ಕಿಳಿಸಿ, ಅದರ ಫಲಿತಾಂಶವನ್ನು ನೋಡಬೇಕು ಫಲವು ಸೂತ್ರಕ್ಕೆ ಅನುಸಾರವಾಗಿದ್ದರೆ ಆಗ ಅದನ್ನು ನಂಬಬೇಕು'

'ನನಗರ್ಥವಾಗಲಿಲ್ಲ! ಸ್ವಲ್ಪ ವಿಶದಪಡಿಸಬೇಕು.' ಎಂದಳು ಚಿತ್ರಾ.

'ಸೂಕ್ಷ್ಮವಾಗಿ ಹೇಳುತ್ತೇನೆ. ಅರಶಿನ ಸುಣ್ಣ ಎರಡನ್ನೂ ಕಲಿಸಿದರೆ ಕೆಂಪಗಾಗುತ್ತದೆ ಎಂದು ಒಂದು ಸೂಚನೆ ಹೇಳುವುದು ಮಾತ್ರ. ಅದನ್ನು ನಿಜವಾಗಿ ಕಲಿಸಿ ನೋಡುವುದು, ಕಲಿಸಿ ನೋಡಿದರೆ ಕೆಂಪಾಗುವುದು ಸೂಚನೆಗೂ ಆದ ವಿಚಾರಕ್ಕೂ ಸಾಮ್ಯ ಬಂದಿತು ಈ ಕೆಂಪಾದುದನ್ನು ಕುಡಿದರೆ ಶೀತದಿಂದ ಬಂದ ಕೆಮ್ಮು ಇತ್ಯಾದಿ ಹೋಗುತ್ತದೆ ಎಂದು ಮತ್ತೊಂದು ಸೂಚನೆ ಬಂದರೆ ರೋಗವಿದ್ದವರಿಗೆ ಕೊಟ್ಟು, ಅದರಿಂದ ವಾಸಿಯಾಗುವುದನ್ನು ನೋಡುವುದು. ವಾಸಿಯಾದರೆ ಸರಿ, ಸೂಚನೆ ಸರಿಯಾಗಿದೆ ಎನ್ನಬೇಕು. ಇದೇ ವಿಜ್ಞಾನದಿಂದ ನಿರ್ಧರಿಸುವುದು ಎಂದರೆ.'

'ಹಾಗಾದರೆ ತಾವು ಹೇಳಿದ್ದೆಲ್ಲಾ ಸದ್ಯದಲ್ಲಿ ಅನ್ವಯಿಸುವ ಹಾಗೆ ತೋರುತ್ತೆ' ಎಂದಳು ಚಿತ್ರಾ.

'ಹೇಗೆ?'

'ಪಂಡಿತರು ಹೇಳಿದರು, ಲೀಲಾ ಮದುವೆಯಾಗುವವನು ಚಕ್ರವರ್ತಿ ಆಗಬೇಕೆಂದು.'

'ಹೌದು'

'ಅದು ಸೂಚನೆ. ಅದರಂತೆಯೆ ಈ ರಾಜನು ಅವಳನ್ನು ಅಪೇಕ್ಷಿಸು ತ್ತಿರುವನು'

'ಸರಿ'

'ಆದ್ದರಿಂದ ಸಾಮುದ್ರಿಕಶಾಸ್ತ್ರವು ನಿಜವೆಂದು ನಂಬಬಹುದೆ?'

'ಅದಕ್ಕೂ ಗ್ರಹಗಳಿಗೂ ಏನು ಸಂಬಂಧ?'

'ಮೊನ್ನೆ ತಾನೆ ಅವರು ಕೈನೋಡಿ, ರೇಖೆಗಳಿಂದ ಹುಟ್ಟಿದ ದಿವಸವನ್ನು ತೆಗೆದುಕೊಡಲಿಲ್ಲವೆ? ಅದಕ್ಕೆ ಸರಿಯಾಗಿ ಶುಕ್ರಾದಿ ಗ್ರಹಗಳ ಬಲಗಳನ್ನು ಹೇಳಲಿಲ್ಲವೆ? ಇನ್ನು ಇದಕ್ಕಿಂತಲೂ ಬೇಕೆ?'

'ಏನೋ ಈ ಸಂದರ್ಭದಲ್ಲಿ ಒಪ್ಪಿಕೊಂಡರೂ ಒಪ್ಪಿಕೊಳ್ಳಬಹುದು'

ಇದೇ ಸಮಯವೆಂದು ತೋರಿತು, ಶ್ಯಾಮಲಾಬಾಯಿಗೆ ಮೆಲ್ಲನೆ 'ನಾನೊಂದು ಮನಸ್ಸಿನಲ್ಲಿ ಅಂದುಕೊಂಡಿದ್ದೇನೆ. ಅದನ್ನು ನೀವು ನಡೆಸಿ-ಕೊಡಬೇಕು.' ಎಂದಳು.

ಮಂತ್ರಿಯು ತನ್ನ ಅತ್ತೆ ಕಡೆ ನೋಡುತ್ತ 'ಏನು, ಹೇಳಿ' ಅಂದ.

ಅತ್ತೆಯು ಹೇಳತೊಡಗಿದಳು. 'ಶನಿಯು ನಿಮಗೆ ಚೆನ್ನಾಗಿಲ್ಲವಂತೆ. ಅವನು ಮೇಷರಾಶಿಯಲ್ಲಿ ರಾಹುವಿನೊಡನೆ ಇದ್ದಾನಂತೆ ಅದಕ್ಕಾಗಿ ನಿಮ್ಮ ತಲೆಗೆ ತೊಂದರೆ ಬರಬಹುದೆಂದು ಪಂಡಿತರು ಹೇಳಿದರು ನಾನು ಅದಕ್ಕೆ ಪರಿಹಾರವನ್ನು ಕೇಳಿದೆ. ಅವರು ಶನಿಗೆ ಪ್ರೀತಿ ಮಾಡುವುದಕ್ಕೆ ಎಳ್ಳನ್ನು ಕೊಡಬೇಕು ಅಂದರು ನಾನು ಮನಸ್ಸಿನಲ್ಲೇ ಅಂದುಕೊಂಡೆ, ಈಶ್ವರ ದೇವ ಸ್ಥಾನಕ್ಕೆ ನಿಮ್ಮ ತಲೆಗಾತ್ರ ಎಳ್ಳನ್ನು ಕಳಿಸಿಕೊಡುತ್ತೇನೆ ಅಂತ!'

'ನನ್ನ ತಲೆಗಾತ್ರ!'

'ಹೌದು.'

'ಅಂದರೆ ನನ್ನ ತಲೆ ಕಡಿದು ಅದನ್ನು ತೂಕ ಮಾಡಿ, ಕಳಿಸಬೇಕೆಂದು ಅಂದುಕೊಂಡಿರೊ!'

'ರಾಮ, ರಾಮ! ಇದೆಂತಹ ಮಾತು!'

'ಸುಮ್ಮನೆ ಹಾಸ್ಯಕ್ಕೆಂದರು. ಸಿಟ್ಟಾಗಬೇಡಮ್ಮ' ಎಂದಳು ಚಿತ್ರಾ.

'ಹಾಗಾದರೆ ನನ್ನ ತಲೆಗಾತ್ರವನ್ನು ಮಾಡುವುದು ಹೇಗೆ?'

'ಇಲ್ಲಿಗೆ ನಾಲ್ಕಾರು ಮಡಿಕೆಗಳನ್ನು ತರಿಸಿದ್ದೇನೆ. ಅದನ ಒಂದೊಂದಾಗಿ ನಿಮ್ಮ ತಲೆಗೆ ತೂರಿಸಿದರೆ, ಯಾವುದು ಆಳತೆಗೆ ಸರಿಯಾ ಸಿಕ್ಕುತ್ತದೋ ಅದನ್ನು ತೆಗೆದಿಟ್ಟರೆ ಸರಿಹೋಗುತ್ತದೆ'ಎಂದಳು ಶ್ಯಾಮಲಾದೇವಿ

'ಬಹಳ ಚೆನ್ನಾಗಿದೆ. ಇದನ್ನು ಯಾರು ಹೇಳಿಕೊಟ್ಟವರು—ಆ ಸಂ ತನೇ ಇರಬೇಕು!' ಎಂದ ಮಂತ್ರಿ.

ನಾಲ್ಕಾರು ಮಡಿಕೆಗಳು ಬಂದವು. ಕೆಲವು ಚಿಕ್ಕವಾದವು ಮತ್ತೆ ಕೆಲವ ಬಹಳ ದೊಡ್ಡವಾದವು. ಇಷ್ಟರಲ್ಲಿ ಇನ್ನೂ ನಾಲ್ಕಾರು ಬಂದವು. ಅದರ ಒಂದು ಮಂತ್ರಿಯ ತಲೆಗೆ ಚೆನ್ನಾಗಿ ಕುಳಿತಂತೆ ಕಾಣಿಸಿತು ಕೂಡಲೆ ಲೀಲ ಮಾತನಾಡದೆ ಮಾಧವ ಒಡೆಯನನ್ನು ಬಾಗಿಲಿಂದಾಚೆಗೆ ಕಳಿಸಿದಳು.

ಮಂತ್ರಿಯ ತಲೆಯಿಂದ ಮಡಿಕೆಯನ್ನು ಈಚೆಗೆ ತೆಗೆಯುವುದರೊಳಗಾ ಪ್ರಪಂಚವೇ ಅಲ್ಲೋಲಕಲ್ಲೋಲವಾದಂತೆ ಧ್ವನಿಗಳು ಬಂದವು ನೂರಾ ಜನ ಮಂತ್ರಿಯ ಮನೆಯ ಅಂಗಳದಲ್ಲಿ ಸೇರಿದ್ದರು.

ಮಾಧವ ಒಡೆಯನು ಈಚೆಗೆ ಬಂದ ಕೂಡಲೆ ಬೈರಾಗಿ, ವೀರಸೇ ಇಬ್ಬರೂ ಬಂದು ನಮಸ್ಕಾರ ಮಾಡಿದರು. ಅವರ ಹಿಂದೆ ನೂರು ಮಂ ಬಂಟರು ತಮ್ಮ ದೊಣ್ಣೆಗಳನ್ನು ಹಿಡಿದುಕೊಂಡು ಬಂದಿದ್ದರು. ನೂರಾ ಜನರು ಅವರನ್ನು ಹಿಂಬಾಲಿಸಿದ್ದರು.

'ನೀವು ಇಲ್ಲಿಯೆ ಇರಬೇಕು.' ಎಂದ ಬೈರಾಗಿ.

'ಏತಕ್ಕೆ?'

'ನಿಮ್ಮನ್ನು ಹಿಡಿಯಲು ದುರ್ಗಸಿಂಹರು ಬರುತ್ತಿದ್ದಾರೆ.'

'ಸರಿಯೆ, ತಯಾರಾಗಿದ್ದೇನೆ.'

'ಅವರ ಹಿಂದೆ ಹೋಗುವುದಕ್ಕಲ್ಲ, ಪ್ರತಿಭಟಿಸುವುದಕ್ಕೆ. ನಮ್ಮ ಹಿಂ ಬಂದಿರುವ ನೂರು ಮಂದಿ ಶಿಷ್ಯರಲ್ಲಿ ಈ ಊರಿನ ವರ್ತಕರಲ್ಲಿ ಮುಕ್ಕಾಲು ಪಾಲು ಇದ್ದಾರೆ ಅವರ ಮೇಲೆ ಒಂದೇಟು ಬಿದ್ದರೆ ಸಾಕು ಸಾವಿರಾ ಜನರು ದುರ್ಗಸಿಂಹನ ಮೇಲೆ ಬೀಳುತ್ತಾರೆ.'

'ಅಂದರೆ?'

'ಅಂದರೆ—ಅದೊಂದು ದೊಡ್ಡ ಯುದ್ಧವನ್ನೇ ಹೂಡಿದ್ದೇವೆ. ಸರಕಾರ ದವರಿಗೆ ಆಯುಧಗಳಿವೆ. ನಮ್ಮವರಿಗೆ ಆತ್ಮಗಳವೆ.'

## ೧೮

ಬೈರಾಗಿ ಬಹಳ ಯುಕ್ತಿವಂತ. ಆ ಊರಿನ ಸಾಹುಕಾರರನ್ನು ತನ್ನ ವೇಷದಿಂದ ವಶಮಾಡಿಕೊಂಡ. ಪ್ರಪಂಚದಲ್ಲಿ ಯಾವುದಾದರೂ ಒಂದು ಆಶೆ ಮನುಷ್ಯನನ್ನು ಪೀಡಿಸುತ್ತದೆ. ಇದು ಆ ಬೈರಾಗಿಗೆ ಚೆನ್ನಾಗಿ ತಿಳಿದಿತ್ತು. ಸಾವಿರಾರು ಕಡೆ ತಿರುಗಿ ಲಕ್ಷಾಂತರ ಜನರನ್ನು ನೋಡಿದ ಆ ಬೈರಾಗಿಗೆ ಈ ಸಾಹುಕಾರರು ಎಷ್ಟರವರು! ಕೆಟ್ಟದ್ದು ಹೇಗೆ ಒಬ್ಬರ ಬಾಯಿಂದ ಮತ್ತೊಬ್ಬರಿಗೆ ಹೋಗುತ್ತ ಇನ್ನೂ ಕೆಟ್ಟುಹೋಗುತ್ತೋ ಹಾಗೆಯೆ, ಏನಾದರೂ ಒಂದು ಅಸಾಧಾರಣ ಸಂಗತಿಯು ನಡೆದರೆ ಅದು ಜನರ ಬಾಯಿಂದ ಬಾಯಿಗೆ ಹೋಗುವಾಗ ಅದ್ಭುತವಾದ ಆಶ್ಚರ್ಯವಾಗುತ್ತದೆ.

ಊರಲ್ಲೆಲ್ಲಾ ಬೈರಾಗಿಯ ಮಹಾತ್ಮೆಯು ಹೆಚ್ಚಿತು; ಚಿಂತಾದ್ರಯ್ಯನಿಂದ ಅಷ್ಟು ಹಣ ಬರಬೇಕಾದರೆ ಕೆಲಸವೆಷ್ಟಾಗಿರಬೇಕೆಂದು ನಾವು ಊಹಿಸಬಹುದು.

ಈ ಶಬ್ದವನ್ನು ಕೇಳಿದ ಮಂತ್ರಿ ಈಚೆಗೆ ಬಂದ. ಮಾಧವ ಒಡೆಯರನ್ನು ನೋಡಿದ. ತನ್ನ ಹತ್ತಿರವಲ್ಲಿದ್ದ ಕತ್ತಿಯನ್ನು ಈಚೆಗೆ ತೆಗೆದ.

ಮಾಧವ ಒಡೆಯ ಮಾತಾಡಲಿಲ್ಲ. ತನ್ನ ಕತ್ತಿಯನ್ನೂ ತೆಗೆಯಲಿಲ್ಲ. ಸುಮ್ಮನೆ ನಿಂತಿದ್ದ.

'ಸಿಕ್ಕಿದೆಯಾ ಅಧಮ!' ಎಂದ ಮಂತ್ರಿ. ಅಷ್ಟು ಹೊತ್ತಿಗೆ ಶ್ಯಾಮಲಾ, ಚಿತ್ರಾ, ಲೀಲಾ, ಎಲ್ಲರೂ ಮಾಧವ ಒಡೆಯನ ಬಳಿಗೆ ಹೋಗಿದ್ದರು. ವೀರಸಿಂಹ ಇದನ್ನು ಕೇಳಿ 'ಮಂತ್ರಿಗಳು ಸ್ವಲ್ಪ ಬಾಯಿ ಬಿಗಿಹಿಡಿದು ಮಾತನಾಡಬೇಕು' ಎಂದ.

'ನನ್ನ ಕೆಲಸವನ್ನು ಮಾಡಲು ದೇವರು ನನಗೆ ಬಹಳ ಅನುಕೂಲ

ಮಾಡಿದ. ಮಾಧವ ಒಡೆಯನಿಗೆ ಇಲ್ಲೇನು ಕೆಲಸ! ಓಹೋ, ನನ್ನ ಮನೆಯವರೂ ನನ್ನ ಮೇಲೆ ನಿಂತಿದ್ದಾರೋ!' ಎಂದ ಮಂತ್ರಿ ಶಾಮಲಾ ಮುಂತಾದವರನ್ನು ನೋಡಿ.

ಬೈರಾಗಿ ಮುಂದಕ್ಕೆ ಬಂದ. 'ಮಂತ್ರಿಗಳ ತಲೆ ಕೆಟ್ಟಿದೆ. ಮಾಧವ ಒಡೆಯರ ಕಡೆಗೆ ಒಂದು ಹೆಜ್ಜೆಯಿಟ್ಟರೆ ನಿಮ್ಮ ತಲೆ ಕೆಳಗೆ ಬೀಳುತ್ತೆ!' ಎಂದ.

'ಬೈರಾಗಿ!' ಎಂದರು ಮಂತ್ರಿಗಳು.

'ಬೈರಾಗಿಯಲ್ಲ. ನಿಮ್ಮ ಪತ್ನಿಯ ಅಣ್ಣ ಶಿವನಾಯಕ' ಎಂದ ಬೈರಾಗಿ.

ಮಂತ್ರಿ ದಿಟ್ಟಿಸಿ ನೋಡಿದ. ಬೈರಾಗಿಯು ತನ್ನ ಸೊಂಟದಿಂದ ಕತ್ತಿಯನ್ನು ತೆಗೆದ.

'ಧೈರ್ಯವಿದ್ದರೆ ಹೆಜ್ಜೆಯಿಡಬಹುದು' ಎಂದ.

'ಇದೇನು, ಎಲ್ಲರಿಗೂ ಹುಚ್ಚು ಹಿಡಿದಿದೆಯೆ! ಅಥವಾ ಏನಾದರೂ ಕನಸೋ!' ಎಂದ ಮಂತ್ರಿ.

'ಅನ್ಯಾಯವಾದ ವಿಚಾರಕ್ಕೆ ಪ್ರವೇಶ ಮಾಡುವವರಿಗೆಲ್ಲಾ ಹೀಗೇ!' ಎಂದಳು ಚಿತ್ರಾ.

ಮಂತ್ರಿ ಚಿತ್ರಾಬಾಯಿಯ ಕಡೆ ನೋಡಿದ. 'ಈಗ ಚೆನ್ನಾಗಿದೆ! ನ್ಯಾಯ ಅನ್ಯಾಯಗಳನ್ನು ಹೇಳುವುದಕ್ಕೆ ತಕ್ಕವಳು ನೀನು!' ಎಂದ.

'ಯಾಕಲ್ಲ?' ಎಂದಳು ಚಿತ್ರಾ.

'ಬಾಯಿಬಿಟ್ಟು ಹೇಳಲೇ!'

'ಹೌದು, ಹೇಳಬೇಕು.'

'ಇದು ವರೆಗೂ ತಡೆದೆ. ಇನ್ನು ತಡೆಯಲಾರೆ. ನಿನಗೂ ಮಾಧವ ಒಡೆಯನಿಗೂ ಏನು ಸಂಬಂಧ?'

'ನನ್ನನ್ನೇತಕ್ಕೆ ಕೇಳುತ್ತೀರಿ. ನೀವೇ ಹೇಳಿ. ತಂಗಿಯ ಗಂಡನಾದರೆ ನನಗೆ ಏನು ಸಂಬಂಧವಾಗಬೇಕೋ?'

'ಇದು ರಾಜದ್ರೋಹ!'

'ಏನು, ನನ್ನ ತಂಗಿಯ ಗಂಡನಾಗುವುದು ರಾಜದ್ರೋಹವೆ?' ಎಂದಳು ಚಿತ್ರಾ.

'ಹೌದು, ರಾಜನಿಗೆ ಸೇರಿದವಳನ್ನು ಬಯಸುವುದು ದ್ರೋಹವಲ್ಲದೆ ಏನು?'

'ನಿಜ. ಮಾಧವ ಒಡೆಯರಿಗೆ ಬರಬೇಕಾದ ರಾಜ್ಯವನ್ನು ತಾನು ಬಯಸಿ ರಾಜನಾದ. ಈಗ ಆತನಿಗೆ ಸೇರಬೇಕಾದ ಹೆಣ್ಣನ್ನು ತಾನು ಬಯಸಿ ಮಾಧವ ಒಡೆಯರನ್ನು ರಾಜದ್ರೋಹಿಯನ್ನಾಗಿ ಮಾಡಿದ! ಇದೇನು ರಾಜನ ರಾಜ ನೀತಿಯೋ ಅಥವಾ ನಿಮ್ಮ ಸಲಹೆಯೋ?' ಎಂದ ಶಿವನಾಯಕ.

ಅಷ್ಟು ಹೊತ್ತಿಗೆ ನೇಮಿಚಂದ್ರಪಂಡಿತ ಅಲ್ಲಿಗೆ ಬಂದ. 'ಊರೆಲ್ಲೆಲ್ಲಾ ದಂಗೆ ಎದ್ದಿದೆ. ಅವರು ಮಾಧವ ಒಡೆಯರನ್ನೇ ರಾಜನನ್ನಾಗಿ ಮಾಡಲು ಇಲ್ಲಿಗೆ ಬರುತ್ತಿದ್ದಾರೆ.'

'ಕೊನೆಗೂ ಈ ಬಡಿದಾಟ ತಪ್ಪಲಿಲ್ಲ!' ಎಂದ ಬೈರಾಗಿ.

'ದೇವರ ಇಚ್ಛೆ! ನಾವು ಮಾಡುವುದೇನಿದೆ?' ಎಂದ ಪಂಡಿತ.

'ಮಂತ್ರಿಗಳ ಮಾತು ಹೇಗಿದೆ?' ಎಂದ ವೀರಸೇನ.

'ನಾನು ದೊರೆಗಳ ಉಪ್ಪನ್ನು ತಿಂದಿದ್ದೇನೆ.'

'ಯಾವ ದೊರೆಗಳ?' ಎಂದಳು ಶ್ಯಾಮಲಾ.

ಮಂತ್ರಿ ಮಾತಾಡಲಿಲ್ಲ ತನ್ನ ಮನೆಯಲ್ಲಿಯೆ ತನಗೆ ಮಾತು ನಿಂತಂತೆ ಆಯಿತು.

ಇದನ್ನೆಲ್ಲಾ ಮರೆಯಲ್ಲೇ ನಿಂತು ನೋಡುತ್ತಿದ್ದ ಮಾಯಾಬಾಯಿ 'ತಪ್ಪಾಯಿತು!' ಎಂದು ಮಾಧವ ಒಡೆಯರ ಕಾಲಿಗೆ ಬಿದ್ದಳು.

'ನನಗೇನೂ ತೊಂದರೆಯಾಗಿಲ್ಲ ನಿಮ್ಮ ಯಜಮಾನರ ಮನಸ್ಸನ್ನು ನೋಯಿಸಿದ್ದೀರಿ. ಅವರ ಕ್ಷಮಾಪಣೆ ಕೇಳಿ.'

ಅಲ್ಲಿಂದೆದ್ದು ಕೈಜೋಡಿಸಿಕೊಂಡು 'ಚಿತ್ರಾ, ನನ್ನ ಕ್ಷಮಿಸು' ಎಂದಳು.

'ಮಂತ್ರಿಗಳ ಆಶೀರ್ವಾದವನ್ನು ಪಡೆಯಕ್ಕ.' ಎಂದಳು ಚಿತ್ರಾ. ಮಾಯಾಬಾಯಿ ಕಣ್ಣಿನಲ್ಲಿ ನೀರು ಹಾಕುತ್ತಾ ತನ್ನ ಗಂಡನ ಪಾದದಲ್ಲಿ ಬಿದ್ದಳು.

ಮಂತ್ರಿ ಮಾತನಾಡದೆ ಅವಳನ್ನು ಹಿಡಿದು ಎಬ್ಬಿಸಿದ. ಮಾಧವ ಒಡೆಯನನ್ನು ಹಿಡಿಯುವುದಕ್ಕೆ ಉಪಾಯವನ್ನು ಅವನು ಯೋಚಿಸುತ್ತಿದ್ದ.

ಅಷ್ಟರಲ್ಲಿ ದೊಡ್ಡ ಜನರ ಗುಂಪು ಅಲ್ಲಿಗೆ ಬಂತು. ಅವರಲ್ಲಿ ಮುಂದೆ ಬಂದ ಇಬ್ಬರು ಗಟ್ಟಿಯಾಗಿ ಕೂಗಿದರು. 'ಮಾಧವ ಒಡೆಯರನ್ನು ನಮಗೆ ತೋರಿಸಿರಿ.' ಎಂದು.

ತನ್ನ ಸ್ಥಳದಿಂದಲೇ ಮಾಧವ ಒಡೆಯರು ಹೇಳಿದರು. 'ನನಗೇನೂ ತೊಂದರೆಯಾಗಿಲ್ಲ ನೀವು ನಿಮ್ಮ ಮನೆಗೆ ಹೋಗಿ.'

'ಇಲ್ಲ. ಈ ದೇಶದಲ್ಲಿ ನೀವು ರಾಜರಾಗುವ ವರೆಗೂ ನಾವು ಹಿಂತಿರುಗಿ ಮನೆಗಳಿಗೆ ಹೋಗುವುದಿಲ್ಲವೆಂದು ಶಪಥಮಾಡಿಕೊಂಡು ಬಂದಿದ್ದೇವೆ.'

'ಅಂದರೆ, ನೀವು ನಿಮ್ಮ ಮನೆಗಳನ್ನು ಬಿಟ್ಟೇ ಬಂದಿದ್ದೀರೆಂದು ಅರ್ಥ ವಾಗುತ್ತದೆ!'

ಹಿಂದಿನಿಂದ ಕೂಗು ಬಂತು. 'ದುರ್ಗಸಿಂಹರು ಸೇನೆಯೊಡನೆ ಬರು- ತ್ತಿದ್ದಾರೆ' ಎಂದು. ಬಂದಿದ್ದ ಜನರೆಲ್ಲಾ ಯುದ್ಧಸನ್ನದ್ಧರಾದರು. ಮಾಧವ ಒಡೆಯ ಇದನ್ನು ನೋಡಿ ಜನರಿಗೆ ಹೇಳಿದ.

'ನೀವು ಏನೂ ಮಾಡುವುದು ಅಗತ್ಯವಿಲ್ಲ. ನಾನು ದುರ್ಗಸಿಂಹರಿಗೆ ಜವಾಬು ಹೇಳುತ್ತೇನೆ. ನೀವು ಸಮಾಧಾನದಿಂದಿರಿ.'

ದುರ್ಗಸಿಂಹನು ತನ್ನ ಸೇನೆಯನ್ನು ಒಂದು ಕಡೆ ನಿಲ್ಲಿಸಿ, ತಾನೇ ಮಾಧವ ಒಡೆಯರನ್ನು ನೋಡಲು ಬಂದ. ಜನರು ಅಡ್ಡಗಟ್ಟಿದರು ಮಾಧವ ಒಡೆಯರು ಒಳಗಿನಿಂದ 'ದಾರಿ ಬಿಡಿ, ಬರಲಿ' ಎಂದರು.

ದುರ್ಗಸಿಂಹನು ಒಳಕ್ಕೆ ಬಂದ.

'ರಾಜರ ಹೆಸರಿನಲ್ಲಿ ಮಾಧವ ಒಡೆಯರನ್ನು ದಸ್ತಗಿರಿ ಮಾಡಿದ್ದೇನೆ' ಎಂದ. ಮಾಧವ ಒಡೆಯರು ನಗುತ್ತ 'ಆಗಬಹುದು. ಆದರೆ ನನ್ನ ಸುತ್ತಲೂ ಇರುವವರನ್ನು ಯಾವ ತೊಂದರೆಯೂ ಪಡಿಸದಂತೆ ಮನೆಗೆ ಕಳಿಸಿಕೊಡ ಬೇಕು' ಅಂದರು.

'ನನ್ನೊಡನೆ ಬರೋಣಾಗಲಿ!' ಎಂದ ದುರ್ಗಸಿಂಹ.

ಇಬ್ಬರೂ ಎರಡು ಹೆಜ್ಜೆ ಮುಂದೆ ಇಟ್ಟರು ಅಷ್ಟರಲ್ಲಿ ಜ್ವಾಲಾಪತಿ ಓಡಿ ಬಂದು ಗಟ್ಟಿಯಾಗಿ 'ಮಹಾರಾಜಾ ಮಾಧವ ಒಡೆಯರಿಗೆ ಜಯವಾಗಲಿ.' ಎಂದ.

ಎಲ್ಲರೂ ಕಲ್ಲಿನ ಕಂಬದಂತೆ ನಿಂತರು.

ದುರ್ಗಸಿಂಹ ಕೇಳಿದ. ತನ್ನ ಕತ್ತಿಯನ್ನು ಸರಿಮಾಡಿಕೊಂಡ. ಜ್ವಾಲಾಪತಿ ಎಲ್ಲರಿಗೂ ಕೇಳುವಂತೆ ಹೇಳಿದ 'ಮಹಾರಾಜರು ಸಮುದ್ರದ ಮೇಲೆ ಹೋದ ಹಡಗು ಮುಳುಗಿಹೋಯಿತು. ಅವರಲ್ಲಿ ಅನೇಕರು ನೀರಿನಲ್ಲಿ ಮುಳುಗಿ ಹೋದರು; ಉಳಿದವರು ಇಲ್ಲಿಗೆ ಬಂದಿದ್ದಾರೆ. ಇನ್ನು ಮೇಲೆ ನಮಗೆ ಒಡೆಯರು ಮಹಾರಾಜರು. ಮಹಾರಾಜ ಮಾಧವಒಡೆಯರಿಗೆ ಜಯವಾಗಲಿ!'

ಎಲ್ಲರೂ ಗಟ್ಟಿಯಾಗಿ ಕೂಗಿದರು.

'ಮಾಧವ ಒಡೆಯರಿಗೆ ಜಯವಾಗಲಿ!'

ಮಂತ್ರಿ ತಲೆ ಬಗ್ಗಿಸಿಕೊಂಡು ನಿಂತ. ದುರ್ಗಸಿಂಹನು ಮೊಣಕಾಲೂರಿ ತನ್ನ ಕತ್ತಿಯನ್ನು ಮಾಧವ ಒಡೆಯರಿಗೆ ಒಪ್ಪಿಸಿದ.

ಚಿತ್ರಾದೇವಿಯು ತನ್ನ ತಂಗಿಯನ್ನು ಗಟ್ಟಿಯಾಗಿ ಅಪ್ಪಿಕೊಂಡಳು.

## ೧೯

ಮಹಾರಾಜರ ಮದುವೆ, ಹೇಳಬೇಕಾದ್ದೇನಿದೆ? ಬಹಳ ವಿಜೃಂಭಣೆಯಿಂದ ಜರುಗಿತು. ಅನೇಕ ದೇಶಗಳಿಂದ ಪಾಳೆಯಗಾರರೂ ರಾಜರೂ ಬಂದಿದ್ದರು. ಎಲ್ಲರೂ ಮಾಧವ ಒಡೆಯರನ್ನೂ ಲೀಲ ಬಾಯಿಯನ್ನೂ ನೋಡಿ ಅವರ ಕಾಂತಿಗೆ ಮನಸೋತರು. ಒಂದು ವಾರದ ವರೆಗೆ ಊರಲ್ಲಿ ಪ್ರತಿಯೊಬ್ಬರ ಮನೆಯಲ್ಲಿಯೂ ಮದುವೆಯ ಓಡಾಟವೇ ಇತ್ತು.

ಒಡೆಯರಿಗೆ ಕುಸ್ತಿಯ ಮೇಲಿನ ಮೋಹ ಹೋಗಲಿಲ್ಲ ಶಿವಪ್ಪನಾಯಕನೇ ಮಂತ್ರಿಯಾದ. ಹಿರಣ್ಯಯ್ಯನು ತನ್ನ ಕೆಲಸವನ್ನು ಬಿಟ್ಟು ಕೇವಲ ವೇದಾಂತಿಯಾದ. ಚಿತ್ರಾ, ಲೀಲಾ ಇಬ್ಬರೂ ಒಬ್ಬರನ್ನೊಬ್ಬರು ಬಿಡದೆ ಇದ್ದರು. ಇಬ್ಬರೂ ಕುಸ್ತಿಗಳಿಗೆ ಹೋಗಿ ಅಲ್ಲಿ ನ್ಯಾಯವನ್ನು ಮಾಡುತ್ತಿ-

ದ್ದರು. ಕೆಲವು ದಿನಗಳಲ್ಲಿಯೆ ಇವರ ನ್ಯಾಯದ ಕೀರ್ತಿ ದೇಶದೇಶಗಳಲ್ಲೂ ಹಬ್ಬಿತು.

ಒಡೆಯರು ಸ್ವತಃ ನ್ಯಾಯವನ್ನು ಮಾಡುವುದರಬದಲಾಗಿ ತನ್ನ ರಾಣಿಗೆ ಆ ಕೆಲಸವನ್ನೊಪ್ಪಿಸಿದರು. ರಾಣಿಯು ಬೆಂಬಲಕ್ಕಾಗಿ ಚಿತ್ರಾಬಾಯಿಯನ್ನೂ ನೇಮಿಚಂದ್ರ ಪಂಡಿತನನ್ನೂ ನೇಮಿಸಿದರು.

ಹೀಗಿರಲು ಹಾಜಿ ಎಂಬೊಬ್ಬ ವರ್ತಕನು ಪರದೇಶಕ್ಕೆ ವ್ಯಾಪಾರಕ್ಕಾಗಿ ಹೋಗಿ ಅಲ್ಲಿ ಮಡಿದನು. ಅವನಿಗೆ ಸಾಕಾದಷ್ಟು ಭೂಮಿಕಾಣಿಗಳಿದ್ದವು; ಆಸ್ತಿ ಚೆನ್ನಾಗಿತ್ತು. ಅವನು ಹೋಗುವುದಕ್ಕೆ ಮುಂಚಿತವಾಗಿ ತನ್ನ ಕೈಲಿದ್ದ ಹಣ ವನ್ನು ನೇಮಿಚಂದ್ರ ಪಂಡಿತನ ಕೈಗೆ ಕೊಟ್ಟು ಹೋಗಿದ್ದನು.

ಈ ಹಾಜಿಗೆ ಒಬ್ಬ ತಂಗಿ ಇದ್ದಳು. ಅಲ್ಲದೆ ಹಾಜೀ ಮನೆಯಲ್ಲಿಯೆ ಅವನನ್ನು ಮದುವೆಮಾಡಿಕೊಳ್ಳದೆ ಅವನ ಹೆಂಡತಿಯಂತೆಯೆ ಕೆಲಸ ಮಾಡಿ ಕೊಂಡಿದ್ದವಳೊಬ್ಬಳಿದ್ದಳು. ಹಾಜಿಯು ಕಾಲವಾದನೆಂದು ತಿಳಿದಕೂಡಲೆ ಇಬ್ಬರೂ ಆ ಸೊತ್ತಿಗಾಗಿ ನೇಮಿಚಂದ್ರನಿಗೆ ತಮ್ಮ ಬೇಡಿಕೆಯನ್ನು ಕಳಿಸಿ ಕೊಟ್ಟರು. ನೇಮಿಚಂದ್ರಪಂಡಿತನಿಗೆ ಅವರ ನಿಜಸ್ಥಿತಿ ಚೆನ್ನಾಗಿ ಗೊತ್ತಿರಲಿಲ್ಲ ವಾಗಿ ಈ ವಿಚಾರವನ್ನು ತೀರ್ಪಿಗಾಗಿ ನ್ಯಾಯಾಸ್ಥಾನದಲ್ಲಿಟ್ಟನು.

ನ್ಯಾಯಾಸ್ಥಾನಕ್ಕೆ ಬಂದ ಮೇಲೆ ಅನ್ಯಾಯವಾಗದಿರಲಿ ಎಂಬುದಕ್ಕೆ ನ್ಯಾಯವಾದಿ ವಕೀಲರು ಅತ್ಯವಶ್ಯ. ಈಚೆ ಒಂದು ವೇಳೆ ವಕೀಲರಿಲ್ಲದೆ ನ್ಯಾಯವಾಗಬಹುದಾದರೂ ನ್ಯಾಯಾಸ್ಥಾನಕ್ಕೆ ಹತ್ತಿದ ಮೇಲೆ ವಕೀಲರ ಬಾಯಿಂದಲೇ ಪದಗಳು ಬರಬೇಕು.

ತಂಗಿ ಕಿಶಿನ ಎಂಬವಳಿಗೆ ಈ ವಿಚಾರ ತಿಳಿದ ಕೂಡಲೆ ಮೈ ಉರಿದು ಹೋಯಿತು. ತನಗೆ ಬರುವ ಆಸ್ತಿಗೆ ಸೊನ್ನೆ ಬೀಳುವ ಹಾಗಿದೆ ಎಂದು ತಿಳಿದ ಕೂಡಲೆ ತನ್ನ ಕಡೆಗೆ ಕೆಲಸಮಾಡಲು ಒಬ್ಬರು ಬೇಕೆಂದು ಕಿಶಿನಳು ಚಿತ್ರಾ-ಬಾಯಿಯ ಮನೆಗೆ ಬಂದು ಕೇಳಿಕೊಂಡಳು ಇದನ್ನು ಕೇಳಿ ಚಿತ್ರಾಬಾಯಿ ಇದು ಒಳ್ಳೆ ಸಮಯವೆಂದು ತಿಳಿದು ತನ್ನ ಅಣ್ಣನನ್ನು ಸಲಹೆ ಕೇಳಿದಳು. ಅಣ್ಣನು ತನಗೆ ನಂಬಿಕೆ ಇರುವ ಮನುಷ್ಯನನ್ನು ಕಿಶಿನಳ ಕೆಲಸವನ್ನು ನೋಡಿ ಕೊಳ್ಳಲು ಗೊತ್ತುಮಾಡುವೆನೆಂದು ಹೇಳಿಕಳಿಸಿದನು. ಇದಾದ ಒಂದೆರಡು ನಿಮಿಷಗಳಲ್ಲಿಯೆ ಅಲ್ಲಿಗೆ ನೇಮಿಚಂದ್ರ ಪಂಡಿತನು ಬಂದನು.

'ಏನು, ಪಂಡಿತರು ಬಹಳ ದೂರ?'

'ಬಹಳ ಹತ್ತಿರ, ಎನ್ನಬಾರದೆ?'

'ವಿಚಾರಗಹನವಾಗಿದ್ದಿರಬಹುದು!'

'ವಿಚಾರಗ್ರಸ್ತನಾಗಿದ್ದರೂ ಇರಬಹುದು!'

'ಕೂತುಕೊಂಡು ನಿದಾನವಾಗಿ ಆಗಬಹುದು.'

'ಕೂತುಕೊಂಡರೆ ನಿದಾನವಾಗಬಹುದು.'

'ಹಾಗಾದರೆ ನಿಂತೇ ಇರಬಹುದು.'

'ಕೆಲಸ ನಿಂತೇ ಇರುವುದು.'

'ಮಾರ್ತಾಂಡ ಸವಣಯ್ಯರದಲ್ಲವೆ?'

'ಹೌದು. ಅದೇ ನಾನೂ ಯೋಚನೆ ಮಾಡುತ್ತಿದ್ದುದು' ಎನ್ನುತ್ತ ಪಂಡಿತನು ಕುಳಿತುಕೊಂಡನು.

'ಅಲ್ಲ. ಈ ಸನ್ನಿವೇಶದಲ್ಲಿ ಅವರು ಕೈಹಾಕುವುದಿಲ್ಲವೋ?'

'ಹಾಕುತ್ತಾರೆಂದೇ ನಾನು ನೋಡುತ್ತಲಿದ್ದೇನೆ ಹಾಕಲಿ ಎಂತಲೇ ನಾನು ಕಿಶಿನಳ ಮೊಕದ್ದಮೆ ನ್ಯಾಯಾಸ್ಥಾನಕ್ಕೆ ತಂದಿಟ್ಟದ್ದು.'

'ಹಾಗಾದರೆ ನಾನಂದುಕೊಂಡ ಹಾಗೆ ಕಿಶಿನಳ ಕಡೆ ಕೆಲಸ ಮಾಡಲು ನಮ್ಮ ರುಸ್ತುಮನನ್ನು ಕೊಡಬಹುದಲ್ಲ.'

'ಏನು, ಕುಸ್ತಿ ಮಾಡುವುದಲ್ಲ ಈ ಕೆಲಸ!'

'ರುಸ್ತುಮನು ನಂಬಿಗಸ್ತ. ನಮಗೆ ಬೇಗ ಎಲ್ಲಾ ತಿಳಿದುಬಿಡುತ್ತೆ.'

'ಆಗಬಹುದು.'

ಪಂಡಿತನು ಹೊರಟುಹೋದ ತರುವಾಯ ರುಸ್ತುಮನನ್ನು ಕರೆಸಿ ಚಿತ್ರಾಬಾಯಿಯ ಮೂಲಕವಾಗಿ ಕಿಶಿನಳ ಮನೆಗೆ ಹೋಗುವಂತೆ ಶಿವಪ್ಪನಾಯಕ ಗೊತ್ತುಮಾಡಿದ.

ರಾಜಾರಾಮನು ಮಡಿದನೆಂದು ತಿಳಿದಕೂಡಲೇ ರುಸ್ತುಮನ ಬಿಡುಗಡೆಯಾಯಿತು ಅಲ್ಲಿಂದಾಚೆಗೆ ರುಸ್ತುಮನ ಕೆಲಸವೆಲ್ಲಾ ಶಿವಪ್ಪನಾಯಕನ ಕೈಕೆಳಗಾಯಿತು ರುಸ್ತುಮನನ್ನು ಬಿಟ್ಟರೂ ರಾಜಿಯನ್ನು ಶಿಕ್ಷಿಸಲಿಲ್ಲ. ಅದು ರುಸ್ತುಮನ ಮನಸ್ಸಿನಲ್ಲಿತ್ತು. ಆದರೆ ಅವನು ಬಾಯಿಬಿಟ್ಟು ಆ ವಿಚಾರವನ್ನು ಯಾರಿಗೂ ಹೇಳಲಿಲ್ಲ

# ೨೦

ಮಾರ್ತಾಂಡರಾಯರು ಸವಣಯ್ಯನವರು ಇಬ್ಬರೂ ಬಹಳ ಸ್ನೇಹಿತರು. ಇಬ್ಬರೂ ವಕೀಲರು ಸಾಮಾನ್ಯವಾಗಿ ಇವರು ಎದುರುಬದುರಾಗಿಯೆ ನ್ಯಾಯಾಸ್ಥಾನದಲ್ಲಿ ಮಾತನಾಡುತ್ತಿದ್ದರು. ಅವರ ಪೈಕಿ ಯಾರು ಗೆದ್ದರೂ ಇಬ್ಬರೂ ಗೆದ್ದ ಹಾಗೆ ಎನ್ನೋ ಭಾವನೆ ಕೆಲವು ಅಧಿಕಾರಿಗಳಿಗೆ ಇತ್ತಂತೆ. ಆದರೆ ಆ ಅಧಿಕಾರಿಗಳು ಇವರ ಮೇಲೆ ಯಾವ ತಪ್ಪನ್ನೂ ಹೊರಿಸಲಾರದೆ ಹೋದರು. ಇವರಿಗೆ ಬಹಳ ಬೇಗನೆ ಸಿರಿ ಒಂದ ಹಾಗೆ ಜನರು ಆಡಿಕೊಳ್ಳುತ್ತಿದ್ದರು. ಶಿವನಾಯಕನು ಜನರ ವಿಚಾರವನ್ನು ತಿಳಿದುಕೊಂಡಾಗ ಇವರ ವಿಚಾರವೂ ಅವನಿಗೆ ತಿಳಿಯಬಂತು. ಆದರೆ ಅವರ ಮೇಲೆ ಯಾವ ತಪ್ಪನ್ನೂ ಆರೋಪಣೆ ಮಾಡಲು ಅವನ ಕೈಯಿಂದಾಗದೆ ಹೋಯಿತು. ಅಲ್ಲದೆ ಅವರು ಪ್ರತಿ ಮೊಕದ್ದಮೆಗೂ ತೆಗೆದುಕೊಳ್ಳುತ್ತಿದ್ದ 'ಫೀ' ಅತ್ಯಲ್ಪವಾಗಿತ್ತು. ಹೀಗಿದ್ದಾಗ ಅವರಿಗೆ ಹಣ ಯಾವ ರೀತಿಯಲ್ಲಿ ಬರುತ್ತಿತ್ತೆಂದು ಯಾರಿಗೂ ತಿಳಿಯದೆ ಇತ್ತು. ತಮ್ಮಲ್ಲಿಗೆ ಬಂದವರನ್ನು ಮೋಸಮಾಡಿ ಅವರು ಸಂಪಾದಿಸುತ್ತಿದ್ದರೆಂದು ಮಿಕ್ಕ ವಕೀಲರು ಕೆಲವರು ಮಾತನಾಡಿಕೊಳ್ಳುತ್ತಿದ್ದರಂತೆ. ಆದರೆ ಅವರಿಗೂ ಸಾಕಾದಷ್ಟು ವಿಚಾರ ಅದರ ವಿಚಾರವಾಗಿ ಗೊತ್ತಿರಲಿಲ್ಲ 'ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆ!' ಎಂದು ತನ್ನ ಮನಸ್ಸಿನಲ್ಲಿಯೇ ಎಂದುಕೊಂಡು ಶಿವಪ್ಪನಾಯಕ ಸಮಯವನ್ನು ಕಾಯುತ್ತಿದ್ದ.

ಕಿಶಿನಳ ಸೋದರತ್ತೆ ಊರಲ್ಲೆಲ್ಲಾ ಹೇಳಿಕೊಂಡು ಬಂದಿದ್ದಳು— ಕಿಶಿನಳು ಬನವಸನನ್ನು ಮದುವೆ ಮಾಡಿಕೊಳ್ಳುತ್ತಾಳೆಂದು. ಆದರೆ ಕಿಶಿನಳ ಕಿವಿಗೆ ಅದು ಬಿದ್ದ ಕೂಡಲೆ ಅವಳು ತನ್ನ ಸೋದರತ್ತೆಯನ್ನು ಅವರ ವಿಚಾರವಾಗಿ ಕೇಳಿದಳು.

'ಹೌದು, ತಪ್ಪೇನು ಕಿಶೀ! ಅವನು ಬುದ್ಧಿವಂತ, ಒಳ್ಳೇ ವ್ಯಾಪಾರಿ. ಅವನಿಗೆ ಬೇಕಾದಷ್ಟು ಹಣವಿದೆ. ನಿನ್ನ ವ್ಯವಹಾರಕ್ಕೆ ಖರ್ಚುಮಾಡಿ ನಿನಗೆ ಸಹಾಯ ಮಾಡುತ್ತಾನೆ.'

'ಅಂದರೆ ನನ್ನ ಹಣಕ್ಕಾಗಿ ಅವನು ಮಾಡಿಕೊಳ್ಳುತ್ತಾನೆ ಅನ್ನಿ.'

'ಉಂಟೆ?'

'ಅವನ ಮುಖ ಕಂಡರೆ ನನಗಾಗದು. ನಾನು ಅವನನ್ನು ಮದುವೆ-ಆಗುವುದಿಲ್ಲ.'

'ಏನು ಕಾಲ ಇದು! ದೊಡ್ಡವರು, ನಮ್ಮ ಮಾತು ಕೇಳದೆ.....'

'ಇಂಥಾ ವಿಚಾರಗಳಲ್ಲಿ ನೀವು ಪ್ರವೇಶ ಮಾಡುವುದು ತಪ್ಪು.'

'ಅಲ್ಲ, ಹುಡುಗಿ! ನಿನಗೇನು ತಿಳಿಯುತ್ತೆ ಇದೆಲ್ಲಾ?'

'ತಿಳಿಯಲಿ ತಿಳಿಯದೆ ಹೋಗಲಿ. ನಾನೇ ಅದರ ವಿಚಾರ ಯೋಚನೆ ಮಾಡಲು ನನಗೆ ಸಾಕಾದಷ್ಟು ವಯಸ್ಸಾಗಿದೆ. ಈ ವಿಚಾರ ನನಗೆ ಇಷ್ಟವಿಲ್ಲ.'

'ಹಾಗಾದರೆ ನಿನ್ನ ವ್ಯವಹಾರವನ್ನು ನಡೆಸುವವರು ಯಾರು?'

'ನಾನೇ.'

'ಹೆಂಗಸು.....ನೀನು!'

'ಯಾಕಾಗಬಾರದು? ಹೆಂಗಸಾದರೆ ನನಗೆ ಯಾವ ವಿಧದಲ್ಲಿಯೂ ಸ್ವಾತಂತ್ರ್ಯವಿಲ್ಲವೆ?'

'ಸ್ವಾತಂತ್ರ್ಯ ಅಂದರೇನೆ? ಎಲ್ಲಿ ಬೇಕಾದಲ್ಲಿ ತಿರುಗುವುದು ಸ್ವಾತಂತ್ರ್ಯ! ಯಾರೊಡನೆ ಬೇಕಾದರೆ ಅವರೊಡನೆ ಮಾತಾಡುವುದು ಸ್ವಾತಂತ್ರ್ಯ!'

'ಹೌದತ್ತೆ! ನೀನು ಈ ಚಿತ್ರವನ್ನು ಬೆಳಸಬೇಡ. ನಾನು ಕೇಳುತ್ತಿ-ರೋದು ಇವೆಲ್ಲ ಅಲ್ಲ. ನಾನು ನನ್ನನ್ನು ಮಾರಿಕೊಳ್ಳೋದು ನನಗಿಷ್ಟವಿಲ್ಲ.'

'ಮಾರಿಕೊಳ್ಳೋದು ಅಂದರೇನೆ?'

'ಆತನನ್ನು ಮದುವೆ ಮಾಡಿಕೊಳ್ಳೋದು ಯಾತಕ್ಕೆ? ಅದರಿಂದ ತನಗೆ ಹಣ ಬರುತ್ತೆ ಅಂತ.'

'ಇದರಿಂದ ನೀನು ಮಾರಿಕೊಂಡ ಹಾಗಾಯ್ತೆ? ಇನ್ನೂ ಅವನು ತನ್ನನ್ನು ಮಾರಿಕೊಂಡ ಹಾಗಾಯ್ತು!'

'ಇಲ್ಲ, ಇಲ್ಲ. ಅವನು ತನ್ನನ್ನು ಹಣಕ್ಕೆ ಮಾರಿಕೊಂಡು ತನ್ನ ಗಂಡಸು ತನದಿಂದ ನನ್ನನ್ನು ಕೊಂಡುಕೊಂಡಂತಾಗುತ್ತೆ. ನನ್ನ ಹಣ ನನಗೆ ಕೊಡಿಸಿ ದ್ದಕ್ಕೆ ನಾನು ಅವನ ದಾಸಿಯಾಗಿ ಅವನ ಮಾತಿನಂತೆ ನಡೆಯಬೇಕಾಗುತ್ತೆ.'

'ಗಂಡನ ಮಾತಿನಂತೆ ನಡಿಯೋದು ಧರ್ಮ!'

'ಇರಬಹುದು....ಗಂಡಅಂತ ಆದಮೇಲೆ. ಗಂಡ ಮಾಡಿಕೊಳ್ಳೋದು ನನ್ನ ಕೈಲಿದೆ. ಮಾಡಿಕೊಂಡ ಮೇಲೆ ನನಗೆ ಸ್ವಾತಂತ್ರವಿಲ್ಲ ಎಂದು ನನ್ನ ಭಾವನೆ.'

'ಅಂದರೆ ಮದುಃವೆಮಾಡಿಕೊಳ್ಳದೇನೇ ಹಾಗೇ ಇರುತೀಯಾ?'

'ಅದರ ಮಾತು ಬೇರೆ. ನೀವು ಬಲವಂತವಾಗಿ ಯಾರಿಗೊ ಕಟ್ಟೋದು ಬೇರೆ.'

'ಯಾರಿಗೋ ಅಂದರೇನೇ!'

'ಅಷ್ಟೆ! ಆತನು ನನಗೆ ಯಾರೋ ಅಲ್ಲದೆ ಮತ್ತೇನು?'

'ಚೆನ್ನಾಯಿತು ಮಾನವ ಧರ್ಮಕ್ಕೇ ಇವರು ತಿಲಾಂಜಲಿಯನ್ನು ಬಿಟ್ಟ ಹಾಗಾಯಿತು. ಇದೆಲ್ಲ ಆ ಬ್ರಾಹ್ಮಣ ನೇಮಿಚಂದ್ರ ಪಂಡಿತ ಮಾಡಿದ ಕೆಲಸ!'

'ಅತ್ತೇ, ಆ ಬ್ರಾಹ್ಮಣನನ್ನು ಏತಕ್ಕೆ ಬೈಯುತ್ತಿ? ನನ್ನ ಇಷ್ಟ.'

'ಅದೇ ನಿಮಗೆಲ್ಲಾ ತಿಳಿದಿರೋದು. ಬ್ರಾಹ್ಮಣರು ಅಂದರೆ ಸಾಮಾನ್ಯರೆ! ಅವರು ಜನರನ್ನು ತಮಗೆ ಬೇಕಾದ ದಾರಿಯಲ್ಲಿ ತಿರುಗಿಸುತ್ತಾರೆ. ಇಲ್ಲದ ಜಾತಿಗಳನ್ನು ಕಲ್ಪಿಸಿದ್ದಾರೆ ಎಲ್ಲಿ ನೋಡಿದರೂ ಅವರೇ ಆಗಿದ್ದಾರೆ. ಅವರು ಹೋಗುವ ವರೆಗೂ ನಮ್ಮ ಜನಕ್ಕೆ ಸುಖವಿಲ್ಲ!'

'ಬೇಡ ಅತ್ತೆ. ಈ ಮಾತಾಡಬೇಡ. ನಿನಗೆ ತಿಳಿಯದು ಈ ವಿಚಾರ. ಅವರನ್ನು ಮನಸ್ಸಿ ಬೈದು ನೀವೆಲ್ಲ ನರಕಕ್ಕೆ ಹೋಗುತ್ತಿದ್ದೀರಿ! ನಿಮಗೆ ತ್ಯಾಗವನ್ನು ಕಲಿಸಿದವರು ಯಾರು? ದೇಶದ ಕೆಲಸಮಾಡುತ್ತ ತಮ್ಮ ಹೊಟ್ಟೆಪಾಡಿಗಾಗಿ ಎಷ್ಟು ಬೇಕೋ ಅಷ್ಟನ್ನೆ ತಿಂದು ಮಿಕ್ಕವುಗಳನ್ನು ದಾನಮಾಡಿ ವಾನಪ್ರಸ್ಥಾಶ್ರಮದಲ್ಲಿರುವವರು ಬೇರೆ ಜಾತಿಯವರು ಯಾರಾದರೂ ಇದ್ದಾರೆಯೆ?'

'ಇದೆಲ್ಲಾ ಸುಳ್ಳು!'

'ಸುಳ್ಳು. ನಿಮಗೆ ನಿಜ ಕಾಣುವುದೇ ಸುಳ್ಳು. ರಾಜನೇ ಪ್ರತ್ಯಕ್ಷ ದೈವವೆಂದು ಸಾರಿದವರು ಯಾರು?'

'ಹರಿಜನರನ್ನು ಆಚೆಗೆ ತಳ್ಳಿದವರು ಯಾರು?'

'ಹರಿಜನರನ್ನು ಆಚೆಗೆ ತಳ್ಳಿದವರು ಬ್ರಾಹ್ಮಣರಲ್ಲ. ಬ್ರಾಹ್ಮಣರಂತೆ ಬಾಹ್ಯಪ್ರಪಂಚದಲ್ಲಿ ತೋರುತ್ತ ಅಂತರಂಗದಲ್ಲಿ ವೈಶ್ಯರಾಗಿರುವರು. ನಿಜವಾದ ಬ್ರಾಹ್ಮಣರು ನಂದನಾರ್ ನನ್ನ ಮಹಾನುಭಾವ ಎನ್ನುವುದಿಲ್ಲವೆ?'

'ಅಂತಹ ಬ್ರಾಹ್ಮಣರು ಇದ್ದಾರೆಯೆ?'

'ಇದ್ದಾರೆ ಆದರೆ ಅವರು ಹೇಳಿಕೊಳ್ಳುವುದಿಲ್ಲ. ನಿಮ್ಮ ರಾಜರ ಕೈಕೆಳಗೆ ಕೆಲಸ ಮಾಡುವುದಕ್ಕೆ ಬರುವುದಿಲ್ಲ. ಅಂತಹವರನ್ನು ನೋಯಿಸಿದರೆ ರಾಜ್ಯವೇ ಅಲ್ಲಿ ಪೂರ್ಣ ಉಳಿಯುವುದಿಲ್ಲ.'

'ಅಲ್ಲ ಇದೆಲ್ಲಾ ನೀನೆಲ್ಲಿ ಕಲಿತೆ!'

'ಎಲ್ಲಿ ಕಲಿಯೋದು. ನಿಮ್ಮ ಜನ ಕೇವಲ ಇಂದ್ರಿಯಗಳ ಮೂಲಕ ಪ್ರಪಂಚವನ್ನು ನೋಡಿ ಕನ್ನಡಿಯಲ್ಲಿರುವ ಗಂಟಿನಿಂದ ಆನಂದವನ್ನು ಪಡೆಯುತ್ತಾರೆ. ಇವುಗಳಿಗೆ ಮೇಲಿನ ಇಂದ್ರಿಯ ಒಂದಿದೆ. ಅದರ ಮೂಲಕ ಪ್ರಪಂಚವನ್ನು ನೋಡಿ. ಐತಿಹಾಸಿಕ ಸುಳ್ಳನ್ನು ನಿಜವೆಂದು ನಂಬಿ ನಿನ್ನಂತೆ ಸಾವಿರಾರು ಜನರು ಮೋಸಹೋಗುತ್ತಿದ್ದಾರೆ. ಬ್ರಾಹ್ಮಣರನ್ನು ಬೈಯುವ ನೀವು ಎಷ್ಟು ತ್ಯಾಗವನ್ನು ಮಾಡಿದ್ದೀರೆಂದು ಯೋಚನೆ ಮಾಡಿ. ಆಮೇಲೆ ಮಿಕ್ಕವರನ್ನು ಬೈಯಿರಿ.'

'ಅಂದರೆ ನಿನ್ನ ಮದುವೆ ವಿಚಾರ.......'

'ನನಗೆ ಸೇರಿದ್ದು. ಅದರ ಗೋಜಿಗೆ ನೀನು ಬರದೆ ಇದ್ದರೆ ಇಬ್ಬರಿಗೂ ಸುಖ.'

'ಸುಖ! ಸುಖ! ನನಗೆಲ್ಲಿಂದ ಬರಬೇಕು? ಏನೋ ನೀನು ಸುಖವಾಗಿರುವುದನ್ನು ನೋಡಿ ಸಂತೋಷಪಡೋಣವೆಂದಿದ್ದೆ—ಅದೂ ನನ್ನ ಹಣೆಯಲ್ಲಿ ಬರೆದಿಲ್ಲ!' ಎನ್ನುತ್ತಾ ಸೋದರತ್ತೆ ಹೊರಟುಹೋದಳು.

ಬಾಗಿಲಲ್ಲಿ ಯಾರೋ ಬಂದು ನಿಂತ ಹಾಗಾಯಿತು. ಕೆಶಿನಳು 'ಒಳಕ್ಕೆ ಬರಬಹುದು' ಎಂದಳು. ರುಸ್ತುಮ ಒಳಕ್ಕೆ ಬಂದ; 'ನಮಸ್ತೆ' ಅಂದ.

'ನಮಸ್ತೆ ಬರಬೇಕು.'

'ಪಂಡಿತರು ಕಳಿಸಿದ್ದಾರೆ.'

'ಸರಿ. ಕೂತುಕೊಳ್ಳಿ.'

ರುಸ್ತುಮನು ಅಲ್ಲಿ ಕುಳಿತ. 'ನಿಮ್ಮ ವ್ಯವಹಾರದ ವಿಚಾರವಾಗಿ' ಎಂದ.

' ಈಗ ತಾನೇ ಅದೇ ವಿಚಾರವಾಗಿ ನಮ್ಮ ಸೋದರತ್ತೆಯ ಸಂಗಡ ಜಗಳವಾಡಿದ್ದಾಯಿತು. ಪಂಡಿತರ ಅಪ್ಪಣೆಯೇನು?'

'ಅವರು ತಮ್ಮ ಕೆಲಸವನ್ನು ನೋಡಿಕೊಳ್ಳಲು ನನ್ನನ್ನು ಕಳಿಸಿದ್ದಾರೆ.'

'ಸರಿಯೆ. ತಾವು ನೋಡಿಕೊಳ್ಳಬಹುದು. ಪಂಡಿತರ ಮಾತಿಗೆ ಎದುರಿಲ್ಲ.'

'ನನ್ನಲ್ಲಿ ನಂಬಿಗೆ ತಮಗಿದೆಯೆ?'

'ಪಂಡಿತರಲ್ಲಿ ನನಗೆ ನಂಬಿಗೆ ಇದೆ. ಅವರು ನನಗೆ ಮೋಸಮಾಡುವುದಿಲ್ಲ. ಅವರು ನಿಮ್ಮನ್ನು ಕಳಿಸಿದ ಮೇಲೆ ನನಗೆ ಅದರ ಯೋಚನೆ ಇಲ್ಲ.'

ಅಷ್ಟರಲ್ಲಿ ಮತ್ತೊಬ್ಬರು ಬಾಗಿಲಲ್ಲಿ ಬಂದು ನಿಂತಹಾಗಾಯಿತು.

'ಯಾರು ಬಾಗಿಲಲ್ಲಿ?' ಎಂದಳು ಕಿಶಿನಳು.

'ನಾನು ಹನುಮಂತ' ಎಂದೊಂದು ಮುದಿಧ್ವನಿ ಪ್ರತ್ಯುತ್ತರಕೊಟ್ಟಿತು.

'ಒಳಕ್ಕೆ ಬನ್ನಿ.' ಎಂದಳು ಕಿಶಿನಳು.

ಒಬ್ಬ ಮುದಿ ಮನುಷ್ಯ ಒಳಕ್ಕೆ ಬಂದ. 'ಮಗೂ, ನನ್ನ ನೋಡಿಲ್ಲ. ನಿಮ್ಮ ತಂದೆ ಇದ್ದಾಗ ಪ್ರತಿ ಕೆಲಸಕ್ಕೂ ನನ್ನನ್ನೇ ಕರೆಯುತ್ತಿದ್ದ. ಕೋರ್ಟಿನ ವ್ಯವಹಾರದಲ್ಲಿ ಬಹಳ ಹುಷಾರಾಗಿರಬೇಕು. ಮಗೂ ನಿನಗೆ ಸಹಾಯ ಮಾಡಲು ಇಲ್ಲಿಗೆ ಬಂದಿದ್ದೇನೆ.' ಎಂದ.

'ಬಹಳ ಸಂತೋಷ.' ಎಂದ ರುಸ್ತುಮ. ಮುದುಕ ರುಸ್ತುಮನ ಕಡೆ ನೋಡಿದ. 'ಏನು ನಿಮ್ಮ.......ಅಲ್ಲವೇನು?' ಎಂದ.

'ಅಲ್ಲ, ಅವರು ನಮ್ಮ ಸ್ನೇಹಿತರು. ನಿಮ್ಮ ಹಾಗೇ ಸಹಾಯ ಮಾಡೋದಕ್ಕೆ ಬಂದಿದ್ದಾರೆ.'

'ಸರಿ, ಹಾಗಾದರೆ ಅವರಿಗೆ ಮಾರ್ತಾಂಡರಾಯರು ತಿಳಿದಿರಬೇಕು.'

'ಚೆನ್ನಾಗಿ ತಿಳಿದಿದೆ,' ಎಂದ ರುಸ್ತುಮ.

'ಅವರು ಇಲ್ಲಿರುವ ಲಾಯರುಗಳ ಪೈಕಿ ಬಹಳ ಬುದ್ಧಿವಂತರು. ಏನಂತೀರಿ?' ಎಂದ ಮುದುಕ.

'ನಾನೂ ಅದೇ ಕೇಳಿದ್ದೇನೆ. ಅವರು ಸಾಧಾರಣವಾಗಿ ಸೋಲುವುದಿಲ್ಲವೆಂತ' ಎಂದ ರುಸ್ತುಮ.

'ನೋಡಿದಿರಾ, ಅದನ್ನು ಹೇಳುವುದಕ್ಕೇ ಬಂದಿದ್ದು. ಶಬರಿ ಇದ್ದಾಳಲ್ಲ, ಅವಳು ಆ ವಕೀಲನನ್ನು ಗೊತ್ತುಮಾಡಿದ್ದಾಳೆ.'

'ಅಂದರೆ ನಮ್ಮ ಕಡೆ ನ್ಯಾಯ ಸಿಗುವುದು ಕಷ್ಟ ಎಂದು ನಿಮ್ಮ ಅಭಿಪ್ರಾಯ' ಎಂದಳು ಕಿಶಿನಳು.

'ಅದನ್ನು ತಿಳಿದೇ ನಾನು ನಿಮ್ಮಲ್ಲಿಗೆ ಬಂದಿದ್ದು. ಆ ಮಾರ್ತಾಂಡರಾಯರನ್ನು ಎದುರಿಸುವುದಕ್ಕೆ ಸರಿಯಾದವರು ಸವಣಯ್ಯನವರು. ನೀವು ಅವರನ್ನು ಹೇಗಾದರೂ ಮಾಡಿ ಒಪ್ಪಿಸಬೇಕು.'

'ಅಂದರೆ ಅವರನ್ನು ಒಪ್ಪಿಸುವುದು ಕಷ್ಟವೇನು?' ಎಂದಳು ಕಿಶಿನಳು.

'ಸರಿಯಾದ ಫೀ ಕೊಟ್ಟರೆ ಒಪ್ಪಿಕೋತಾರೆ' ಎಂದ ರುಸ್ತುಮ.

'ಇಲ್ಲ. ಅವರು ರಿಟೈರಾಗಿ ಬಿಟ್ಟಿದ್ದಾರೆ' ಎಂದ ಮುದುಕ.

'ಮೊನ್ನೆ ಕೋರ್ಟಿಗೆ ಬಂದ ಹಾಗಿತ್ತು!' ಎಂದ ರುಸ್ತುಮ.

'ಅದೇ ಅವರ ಕೊನೆಯ ವ್ಯವಹಾರ.' ಎಂದು ಮುದುಕ ಪ್ರತ್ಯುತ್ತರವಿತ್ತ.

'ಹಾಗಾದರೆ ಅವರನ್ನು ಏನಾದರೂ ಮಾಡಿ ಒಪ್ಪಿಸಬೇಕಲ್ಲ ' ಎಂದಳು ಕಿಶಿನಳು.

'ಅದಕ್ಕೇ ನಾನಿಲ್ಲಿ ಬಂದಿದ್ದು!' ಎಂದ ಮುದುಕ.

'ಅದಕ್ಕೇನಾದರೂ ಉಪಾಯವುಂಟೆ?'

'ಉಂಟು. ನಾನವರನ್ನು ಇಲ್ಲಿಗೆ ಕರೆದುಕೊಂಡು ಬರುತ್ತೇನೆ. ನೀವೇ ಅವರೊಡನೆ ಮಾತಾಡಿ. ಆದರೆ ಅವರು ಕೇಳಿದಷ್ಟು ಹಣವನ್ನು ಕೊಡಬೇಕು. ಇಲ್ಲವಾದರೆ ನಿಮ್ಮ ಆಸ್ತಿ ಅವರ ಪಾಲಾದೀತು!'

'ಆಗಲಿ.'

'ಬರತೇನೆ.' ಎನ್ನುತ್ತ ಮುದುಕ ಹೊರಟುಹೋದ. ಅಲ್ಲಿಂದ ಹೊರಟವನು ಸವಣಯ್ಯನವರ ಆಫೀಸಿಗೆ ಬಂದ. ಅಲ್ಲಿ ಸವಣಯ್ಯನವರೂ ಮಾರ್ತಂಡರಾಯರೂ ಇಬ್ಬರೂ ಮಾತನಾಡುತ್ತ ಕುಳಿತಿದ್ದರು.

'ಏನೋ ಹನುಮಂತ?' ಎಂದರು ಸವಣಯ್ಯ.

'ನನ್ನ ಹೆಸರು ಅನುಮಂತ ಅಲ್ಲ ದೇವ್ರು ಮರುಮಂತ'

'ಯಾವಾಗಿನಿಂದ?'

'ಇವತ್ತು ಕಿಶಿನಳ ಮನೆಗೆ ಹೋಗಿ ನಿಮ್ಮ ಕೆಲಸ ಮಾಡಿಕೊಂಡು ಬಂದಾಗಿನಿಂದ.'

'ಅಂದರೆ ಕೆಲಸ ಆಯಿತೆ?'

'ಆದ ಹಾಗೇ. ತಾವು ಅಲ್ಲಿಗೆ ದಯಮಾಡಿಸಿದರೆ....'

'ನಾನು ಎರಡು ಸಾವಿರವಿಲ್ಲದೆ ಯಾರ ಮನೆಗೂ ಹೋಗುವುದೇ ಇಲ್ಲ ವಲ್ಲ. ಇದೇನೋ ನನ್ನ ದರ್ಜೆ ಕಡಿಮೆ ಮಾಡಿದ ಹಾಗೆ ಕಾಣುತ್ತೆ ನೀನು!'

'ಇಲ್ಲ, ಸ್ವಾಮಿ. ಅವರು ಒಪ್ಪಿದ್ದಾರೆ. ನಾವು ಹೋಗುವುದೊಂದೇ ಬಾಕಿ.'

'ಆಗಲಿ, ಹೋಗುವ. ಏನಂತಾರೆ, ಮಾರ್ತಾಂಡರಾಯರು?' ಎಂದರು ಸವಣಯ್ಯ. 'ಆಗಬಹುದು. ತಮ್ಮ ಕೆಲಸ ತಾವು ನೋಡೋಣಾಗಲಿ. ನನಗೂ ಕೆಲಸವಿದೆ. ಅವರು ಬರುತ್ತಾರೆ.' ಎಂದರು ಮಾರ್ತಾಂಡರಾಯರು.

## ೨೧

ಮಾರ್ತಾಂಡರಾಯರು ದೂರದಿಂದಲೇ ಶಬರಿ, ಅವಳ ತಮ್ಮ ಕಿಷನ್ ಇಬ್ಬರೂ ತಮ್ಮ ಮನೆಗೆ ಬರುತ್ತಿದ್ದುದನ್ನು ನೋಡಿದರು. ಅಲ್ಲೇ ಮೇಜಿನ ಮೇಲೆ ಬಿದ್ದಿದ್ದ ಒಂದು ಲೆಕ್ಕದ ಪುಸ್ತಕವನ್ನು ತೆಗೆದುಕೊಂಡು ಒಂದೊಂದೇ ಹಾಳೆಯನ್ನು ತಿರುವಿ ಹಾಕುವುದಕ್ಕೆ ಮೊದಲುಮಾಡಿದರು.

ಸೇವಕ ಬಂದು ಹೇಳಿದ. 'ಯಾರೋ ತಮ್ಮನ್ನು ನೋಡೋದಕೆ ಬಂದಿದ್ದಾರೆ' ಅಂತ.

'ಒಳಕ್ಕೆ ಬರಲಿ' ಎಂದರು ರಾಯರು. ಶಬರಿ ಅವಳ ತಮ್ಮ ಕಿಷನ್ ಇಬ್ಬರೂ ಒಳಕ್ಕೆ ಬಂದರು.

'ಕೂಡಿ ಒಂದು ನಿಮಿಷ, ಬರತೀನೆ' ಎಂದರು ರಾಯರು ಪುಸ್ತಕದ ಹಾಳೆಯನ್ನು ಹಾಗೆಯೆ ತಿರುವಿ ಹಾಕುತ್ತಾ.

ಬಂದವರಿಬ್ಬರೂ ಕುಳಿತರು. ಹತ್ತಾರು ಪೇಜನ್ನು ರಾಯರು ತಿರುವಿ ಹಾಕಿ ಶಬರಿಯ ಕಡೆ ನೋಡಿ ತಮ್ಮ ಕುರ್ಚಿಯನ್ನು ತಿರುಗಿಸಿದರು.

'ಸರಿ. ತಮ್ಮ ವಿಚಾರವಿನ್ನು' ಎಂದರು.

'ಹನುಮಂತರಾಯರು ಮನೆಗೆ ಬಂದಿದ್ದರು ಹೇಳಿದರು. ನಾವು ಐನೂರು ರೂಪಾಯಿ ಕೊಡೋದಕ್ಕೆ ತಯಾರಾಗಿದ್ದೇವೆ.' ಎಂದಳು ಶಬರಿ.

ರಾಯರು ನಕ್ಕರು. 'ಐನೂರು! ಇನ್ನೂ ನಿಮಗೆ ಸಮಾಚಾರವೇ ಸರಿಯಾಗಿ ತಿಳಿದ ಹಾಗೆ ತೋರಲಿಲ್ಲ.'

'ಯಾಕೆ ಸ್ವಾಮಿ?' ಎಂದ ಕಿಷನ್.

'ಅಯ್ಯಾ, ಆಕಡೆ ಸವಣಯ್ಯನವರನ್ನು ಅವರು ಏರ್ಪಾಟು ಮಾಡಿದ್ದಾರೆ. ನಿಮಗೆ ಒಂದು ಕವಡೆ ಕೂಡ ಬರುವ ಹಾಗಿಲ್ಲ.'

'ಅಂದರೆ?'

'ಅಂದರೆ—ಈ ಆಸ್ತಿ ಕಾನೂನಿನ ಪ್ರಕಾರ ನಿಮಗೆ ದಕ್ಕುವುದೇ ಇಲ್ಲ. ನೀವು ಏನು ಮಾಡಿದರೂ ಸಿಗುವುದಿಲ್ಲ. ಮದುವೆಯಾಗದೆ ಇದ್ದರೆ ಈ ನಿಮ್ಮ ಅಕ್ಕನಿಗೆ ಒಂದು ಚಿಕ್ಕ ಕವಡೆಗೆ ಕೂಡ ಹಕ್ಕಿಲ್ಲ. ಆದರೆ....'

'ಆದರೆ?'

'ನಿಮಗೆ ಬರೋ ಭಾಗದಲ್ಲಿ ನನಗೆ ಅರ್ಧವನ್ನು ಕೊಡೋ ಹಾಗಿದ್ದರೆ, ಈ ವ್ಯವಹಾರಕ್ಕೆ ನಾನು ಕೈಹಾಕುತ್ತೇನೆ. ಇಲ್ಲದಿದ್ದರೆ ನೀವು ಮತ್ತಾರಲ್ಲಿಯಾದರೂ ಹೋಗಬಹುದು.' ಎಂದರು ರಾಯರು.

'ಎಂದೂ ಯಾರೂ ಕೇಳಿದ್ದಿಲ್ಲ ಇದನ್ನ 'ಎಂದ ಕಿಷನ್.

'ನಿಮಗೇ ಗೊತ್ತಿದೆ. ಮದುವೆಯಾಗಿದ್ದರೆ ವಿಚಾರ ಬೇರೆ. ಅದಿಲ್ಲ. ಲಾ ಪ್ರಕಾರ ನಿಮಗೆ ಏನೂ ಬರೋದಿಲ್ಲ. ನನ್ನ ಬುದ್ಧಿವಂತಿಕೆಯಿಂದ ನಿಮಗೆ ಬರಬೇಕು. ಆ ಬುದ್ಧಿವಂತಿಕೆಗೆ ತಕ್ಕ ಪ್ರತಿಫಲ ನನಗೆ ಬರಬೇಕು. ಸುಮ್ಮನೆ ಮಾತಾಡಿ ಉಪಯೋಗವಿಲ್ಲ. ನನ್ನಂತೆ ಬಂದರೆ ಕೆಲಸ ಆಗುತ್ತೆ. ಇಲ್ಲದಿದ್ದರೆ ಈ ವ್ಯವಹಾರಕ್ಕೆ ನಾನು ಬರೋದೇ ಇಲ್ಲ.'

'ಆಗಲಿ.' ಎಂದಳು ಶಬರಿ.

'ಅದು ಬುದ್ಧಿವಂತಿಕೆ ಮಾತು. ನಲವತ್ತು ಸಾವಿರ ರೂಪಾಯಿನ ಆಸ್ತಿ.

ನಿಮಗೆ ಸುಮ್ಮನೆ ಇಪ್ಪತ್ತುಸಾವಿರ ಬಂದ ಹಾಗಾಗುತ್ತೆ! ಏನೂ ಇಲ್ಲದೆ ಸುಮ್ಮನೆ ಇರುವ ಬದಲು ನಿಮಗೆ ಅರ್ಧ ಬಂದ ಹಾಗಾಯಿತಲ್ಲ. ನೋಡಿ.'

'ನಮ್ಮಕ್ಕ ಒಪ್ಪಿದ್ದಾಳಲ್ಲ.' ಎಂದ ಕಿಷನ್.

'ಸರಿ. ನೀವು ಈಗ ಹಣವನ್ನು ಕೊಡಬೇಕಾಗಿಲ್ಲ. ಸ್ಟ್ಯಾಂಪ್ ಗೀಂಪ್ ಖರ್ಚಿಗೆ ಇನ್ನೂರು ರೂಪಾಯಿ ಮಟ್ಟಿಗೆ ಕೊಡಿ.' ಎಂದರು ರಾಯರು.

'ತಗೊಳ್ಳಿ.' ಎಂದು ಕಿಷನ್ ಇನ್ನೂರು ರೂಪಾಯಿ ಕೊಟ್ಟ.

'ಸರಿ, ಈಗ ಹೇಳ್ತೀನೆ. ನೀವು ಮಾಡಬೇಕಾದ ಕೆಲಸ. ಹೇಳಲೇ?'

'ಆಗಲಿ, ರಾಯರೆ' ಎಂದ ಕಿಷನ್.

'ಮದುವೆಯಾಗದೆ ಇದ್ದುದರಿಂದ ಹೆಂಡತೀಗೆ ಹಕ್ಕಿಲ್ಲ. ಆದರೆ ನಿನ್ನ ಮಗನ ಹಕ್ಕನ್ನು ಯಾರೂ ಕಳೆಯುವ ಹಾಗಿಲ್ಲ.'

'ಮಗ! ನನಗೆಲ್ಲಿ ಮಗ! ನನಗೆಲ್ಲಿ ಹುಟ್ಟಲಿಲ್ಲವಲ್ಲ!' ಎಂದಳು ಶಬರಿ.

'ಮಗ ಇಲ್ಲ ಎಂಬೋ ಮಾತು ಚೆನ್ನಾಗಿಲ್ಲ. ಅವನು ಹುಟ್ಟಿ ಈಗಾಗಲೇ ಏಳು ತಿಂಗಳಾಯಿತು. ಹಾಜಿ ಇನ್ನೂ ಬದುಕಿರಬೇಕಾದರೇನೆ ನಿನಗೆ ಆ ಮಗ ಹುಟ್ಟಿದ. ಅದನ್ನು ಎತ್ತಿಕೊಂಡಿದ್ದುದನ್ನು ನೋಡಿದ ಸಾಕ್ಷಿಗಳು ಎಷ್ಟೋ ಜನ ಇದ್ದಾರೆ. ಹಾಜಿಯ ಬಾಯಿಂದಲೆ ತನಗೆ ಮಗ ಹುಟ್ಟಿದನೆಂದು ಕೇಳಿದವರಿದ್ದಾರೆ.'

'ಎಲ್ಲಾದರೂ ಉಂಟೆ! ನಾನೀ ಸುಳ್ಳನ್ನು ಹೇಗೆ ಹೇಳಲಿ!' ಎಂದಳು ಶಬರಿ.

'ಸುಳ್ಳಲ್ಲ—ಇದು ನಿಜ. ನಿಮಗೆ ವ್ಯವಹಾರದ ರೀತಿಯೇ ಗೊತ್ತಿಲ್ಲ.' ಎಂದರು ರಾಯರು.

'ಆಡಬಾರದ್ದನ್ನು ಬಾಯಲ್ಲಿ ಆಡಲೆ?'

ಹೌದಮ್ಮ, ಹಾಗೆ ಮಾಡಿದರೇನೆ ನಿಮಗೆ ಈ ಆಸ್ತಿ ಸಿಗೋದು. ಬುದ್ಧಿ ಇಲ್ಲದವರೇ ಸತ್ಯ ಸತ್ಯ! ಎಂದು ಒದ್ದಾಡೋರು. ನಿಮಗೆ ಈ ಆಸ್ತಿ ಬರಬೇಕಾದದ್ದು ಸತ್ಯ, ನಿಜ. ಅದು ಬರುವುದಕ್ಕೆ ನೀವು ಏನು ಮಾಡಿದರೂ ಸತ್ಯಕ್ಕಾಗಿ ಹೊಡೆದಾಟವೆ – ನೀವು ಮಾಡುವುದು ಹೇಳುವುದು ಎಲ್ಲಾ ನಿಜವೇ ಸ್ವಲ್ಪ ಯೋಚನೆ ಮಾಡಿ. ಈ ಒಂದು ಮಾತಿಗೋಸ್ಕರ ನೀವು ನಿಮಗೆ ಬರಬೇಕಾದ್ದನ್ನು ಕಳೆದುಕೊಳ್ಳಬೇಡಿ.' ಎಂದರು.

'ರಾಯರಿಗೇನು ತಿಳಿಯದೆ! ಅವರು ಹೇಳಿದ ಹಾಗೆ ನಾವು ಕೇಳಬೇಕು' ಎಂದ ಕಿಷನ್.

'ನಚಕ್ಷುಸಾ ಗೃಹ್ಯತೇನಾಪಿ—ಎಂದಿದ್ದಾರೆ ಆ ನಿಜವನ್ನು! ಸತ್ಯ, ಸತ್ಯ, ನಿಜ, ನಿಜ ಎಂತೇವಾಗಲಿ ಅದನ್ನು ನಿಜವಾಗಿ ತಿಳಿದುಕೊಂಡಿದ್ದೋರು ಯಾರಿದ್ದಾರೆ? ಮೋಸ, ಸತ್ಯ ಇವೆಲ್ಲ ಸ್ಥಾವರವಲ್ಲ; ಒಬ್ಬರಿಗೆ ಮೋಸ ಇನ್ನೊಬ್ಬರಿಗೆ ಸತ್ಯ! ನೀವು ವ್ಯವಹಾರಕ್ಕೆ ಬಂದ ಮೇಲೆ ನಮ್ಮ ಮಾತು ಕೇಳಬೇಕು. ಇದು ವ್ಯವಹಾರ ಸತ್ಯ!' ಎಂದರು ರಾಯರು.

'ವ್ಯವಹಾರ ಸತ್ಯ-ಎಂತ ಬೇರೆಯುಂಟೆ?' ಎಂದ ಕಿಷನ್.

'ಅದೇ ಅದರಲ್ಲಿರೋ ಸ್ವಾರಸ್ಯ! ನಾವಿಲ್ಲಿರೋದು ಸತ್ಯವನ್ನು ಕಾಪಾಡೋದಕ್ಕೆ. ಪ್ರಕೃತ ನಿಮ್ಮ ವ್ಯವಹಾರದಲ್ಲಿ ಹಾಜಿ ಆಸ್ತಿ ನಿಮಗೆ ಬರಬೇಕಾದದ್ದು ಸತ್ಯ. ಆದರೆ ಕೇವಲ ಒಂದು ಸಾಂಘಿಕ ಲೋಪದಿಂದ—ಅಂದರೆ ಮದುವೆ ಎಂಬುದೊಂದು ಆಗದೆ ಇದ್ದುದನ್ನು ನಾವೀಗ ಯುಕ್ತಿಯಿಂದ ಸಾಧಿಸಬೇಕು. ಈ ಯುಕ್ತಿ ಸತ್ಯಕ್ಕಾಗಿ, ಇದನ್ನು ಅಸತ್ಯ ಅಥವಾ ಸುಳ್ಳು ಎನ್ನಬಾರದು. ಪ್ರಪಂಚದಲ್ಲಿ ಎಲ್ಲರೂ ಸತ್ಯವನ್ನೇ ಅವಲಂಬಿಸಿದರೆ ಈ ಕೋರ್ಟು-ಕಚೇರಿಗಳೇತಕ್ಕೆ? ಇಬ್ಬರೂ ಸತ್ಯವನ್ನೇ ಅವಲಂಬಿಸುತ್ತಿದ್ದಾರೆಂದು ಬಂದಾಗ ಅಲ್ಲವೆ ಯಾವುದು ನಿಜವಾದ ಸತ್ಯ ಎಂಬುದೊಂದು ಬರಬೇಕಾದದ್ದು. ಆದಕ್ಕೇ ಈ ಜಗತ್ತಿನಲ್ಲಿ ಸತ್ಯಕ್ಕೆ ತರತಮಗಳಿರೋದು.'

'ಅದೇನೋ ನಮಗೆ ಇದೊಂದೂ ಅರ್ಥವಾಗದು. ಆದರೆ ನೀವು ಹೇಳಿದಂತೆ ಮಾಡುತ್ತೇವೆ' ಎಂದಳು ಕಿಶಿನಳು. ಅವಳ ಕಣ್ಣಲ್ಲಿ ನೀರು ಬಂತು.

'ಅಯ್ಯೋ ನೀವೇತಕ್ಕೆ ಅಳುತ್ತೀರಿ? ನಿಮ್ಮ ಆಸ್ತಿ ನಾನು ತರಿಸಿಕೊಡ ತೇನೆ' ಎಂದರು ರಾಯರು.

'ಅದಕ್ಕಲ್ಲ' ಎಂದು ಮನಸ್ಸಿನಲ್ಲಿಯೆ ಕಿಶಿನಳು ಅಂದುಕೊಂಡಳು.

'ನೀವು ನಾಳೆ ಬನ್ನಿ. ನಾನು ಎಲ್ಲಾ ತಯಾರ್ಮಾಡಿರ್ತೇನೆ. ಆದರೆ ಈ ಗುಟ್ಟನ್ನು ಮುಟ್ಟಿಗೆ ಆಚೆ ಬಿಟ್ಟೀರಿ!' ಎಂದರು ರಾಯರು.

'ಉಂಟೆ!' ಎಂದ ಕಿಷನ್. ಇಬ್ಬರೂ ಹೊರಟುಹೋದರು.

ಆ ದಿನ ಮಾರ್ತಾಂಡರಾಯರು ಹನುಮಂತನ ಕೈಲಿ ಬಹಳ ಹೊತ್ತು ಈ ವಿಚಾರವಾಗಿಯೆ ಮಾತನಾಡುತ್ತಿದ್ದರು.

೨೨

ಊರಿನವರಿಗೆಲ್ಲಾ ಈ ವ್ಯವಹಾರದಲ್ಲಿ ಬಹಳ ಕುತೂಹಲವಿತ್ತು. ಕೆಲವರು ಹೆಂಗಸರಿಗೆ ನಮ್ಮ ಕಾನೂನಿನಲ್ಲಿ ಸರಿಯಾದ ಸ್ಥಳ ಕೊಟ್ಟಿಲ್ಲ, ಅವರಿಗೆ ಮರ್ಯಾದೆ ಕಡಿಮೆ ಎಂದು ವಾದಿಸುತ್ತಿದ್ದರು. ಮತ್ತೆ ಕೆಲವರು ಈ ವಿಧವಾದ ಸ್ವಾತಂತ್ರ್ಯವಿದ್ದರೆ ನಮ್ಮ ಹಿಂದೂ ಧರ್ಮಕ್ಕೇ ಕುಂದು ಬರುತ್ತೆ ಎನ್ನುತ್ತಿದ್ದರು. ಅದು ಹೇಗಾದರೂ ಇರಲಿ, ಈ ವ್ಯವಹಾರವು ಒಂದು ವಿಚಾರದಲ್ಲಿ ವಿಶೇಷ ಗುಣವುಳ್ಳದ್ದಾಗಿತ್ತು. ನೇಮಿಚಂದ್ರ ಪಂಡಿತನೂ ಇದರಲ್ಲಿದ್ದ ಕಾರಣ ಈ ವ್ಯವಹಾರವನ್ನು ನ್ಯಾಯಾಸ್ಥಾನದಲ್ಲಿಟ್ಟಾಗ ಆತನು ಅಲ್ಲಿ ನ್ಯಾಯಾಧಿಪತಿಯಾಗಿರಲಿಲ್ಲ. ಆದುದರಿಂದ ನ್ಯಾಯವನ್ನು ಮಾಡುವವರು ಹೇಳುವವರು ರಾಣಿ ಲೀಲಾ, ಚಿತ್ರಾಬಾಯಿ ಇವರೇ ಆಗಿದ್ದರು. ವ್ಯವಹಾರ ಹೆಂಗಸರಿಬ್ಬರಿಗೆ; ಅದನ್ನು ನ್ಯಾಯಮಾಡಲು ಹೆಂಗಸರಿಬ್ಬರು. ಇದರ ಪರಿಣಾಮವು ಹೇಗಾಗುವುದೋ ನೋಡೋಣವೆಂದು ಊರಿನ ಮುಖ್ಯಸ್ಥರೆಲ್ಲರೂ ಆ ದಿನ ನ್ಯಾಯಾಸ್ಥಾನಕ್ಕೆ ಬಂದಿದ್ದರು.

ವಿಚಾರಣೆಯು ಪ್ರಾರಂಭವಾಯಿತು. ಮೊದಲು ಶಶಿನಳನ್ನು ಕರೆದರು. ಅವಳು ಬಂದು ಪ್ರಮಾಣಮಾಡಿದ ಮೇಲೆ ಅವಳನ್ನು ವಿಚಾರಣೆಮಾಡಿದರು.

'ನಿನ್ನ ಹೆಸರೇನು?'

'ಶಶಿನಳು, ತಾಯಿ.'

'ಹಾಜೀಗೇನಾಗಬೇಕು?'

'ಆತನ ತಂಗಿ.'

'ಅಣ್ಣಾತಮ್ಮಂದಿರು ಯಾರಾದರಿದ್ದಾರೆಯೆ?'

'ಯಾರೂ ಇಲ್ಲ.'

'ಆತನ ಆಸ್ತಿ ನಿನಗೆ ಸೇರಬೇಕಾದದ್ದೆ?'

'ಹೌದು. ನನಗೇ ಅದರ ಹಕ್ಕಿರುವುದು.'

'ಶಬರಿಗೂ ಹಾಜಿಗೂ ಏನು ಸಂಬಂಧ?'

'ನಾವೆಲ್ಲ ಒಟ್ಟಿಗಿದ್ದೆವು. ಆದರೆ ನನ್ನಣ್ಣ ಆಕೆಯನ್ನು ಮದುವೆಮಾಡಿಕೊಳ್ಳಲಿಲ್ಲ.'

'ಆಕೆಗೆ ಮಕ್ಕಳುಂಟೆ?'

'ಇಲ್ಲ, ತಾಯಿ.'

'ನೀನು ಆತನ ತಂಗಿ ಎಂದು ಹೇಳುವುದಕ್ಕೆ ಸಾಕ್ಷಿಗಳು ಯಾರಾದರೂ ಇದ್ದಾರೆಯೆ?'

'ನಾಲ್ಕು ಮಂದಿ ಇದ್ದಾರೆ. ಅವರನ್ನು ಕರೆಸಿ ಕೇಳಬಹುದು.'

'ಹೆಚ್ಚಿನ ವಿಚಾರವೇನಾದರೂ ಮಾರ್ತಾಂಡರಾಯರು ಕೇಳುವುದಿದ್ದರೆ ಕೇಳಬಹುದು.' ಎಂದರು ಸವಣಯ್ಯನವರು.

ಮಾರ್ತಾಂಡರಾಯರು ಗಂಟಲನ್ನು ಸರಿಮಾಡಿಕೊಳ್ಳುತ್ತ 'ಏನೂ ಇಲ್ಲ,' ಎಂದರು. ಕಿಶಿನಳು ತನ್ನ ವಿಚಾರವನ್ನು ಹೇಳಿ ಅಲ್ಲೇ ಕುಳಿತಳು.

ಶಬರಿಯನ್ನು ಕರೆದುಕೊಂಡು ಬಂದು ನಿಲ್ಲಿಸಿದರು. ಅವಳ ಕಂಕುಳಲ್ಲಿ ಒಂದು ಮಗು ಇತ್ತು. ಪ್ರಮಾಣ ಮಾಡ್ಸಿದನಂತರ ಅವಳನ್ನು ವಿಚಾರಣೆ ಮಾಡಿದರು.

'ಹೆಸರು?'

'ಶಬರಿ.'

'ಎಷ್ಟು ವರ್ಷಕಾಲ ನೀನು ಹಾಜಿಯ ಜೊತೆಯಲ್ಲಿ ಸಂಸಾರಮಾಡಿಕೊಂಡಿದ್ದೆ?' ಎಂದರು ಮಾರ್ತಾಂಡರಾಯರು.

'ನಾಲ್ಕು ವರ್ಷ ಸ್ವಾಮಿ.'

'ನಿನಗೂ ಅವರಿಗೂ ಮದುವೆಯಾಗಿತ್ತೋ?'

'ಇಲ್ಲ.'

'ನಿನಗೇನಾದರೂ ಮಕ್ಕಳೋ?'

'ಒಂದು.' ಎನ್ನುತ್ತ ತನ್ನ ಕಂಕುಳಲ್ಲಿದ್ದ ಮಗುವನ್ನು ತೋರಿಸಿದಳು.

ಕೋರ್ಟಿನಲ್ಲಿ ಗುಜುಗುಜು ಶಬ್ದ ಮೊದಲಾಯಿತು. ಅಲ್ಲಿದ್ದ ಜವಾನ 'ಸದ್ದು' ಎಂದ. ಎಲ್ಲರೂ ಸುಮ್ಮನಾದರು. ರಾಣಿಯವರು ಕೇಳಿದರು.

'ಇದೆ ಎನ್ನುವುದಕ್ಕೆ ಸಾಕ್ಷಿ ಯಾರು?'

'ಆತನ ತಂಗಿ ಎಂದು ಹೇಳಿದರಲ್ಲ, ಅವರೇ ತಾಯಿ.'

'ಅವರನ್ನು ಕರೆಸಿ. ನೀನಿನ್ನು ಹೋಗಬಹುದು.'

ನಾಲ್ಕು ಜನರನ್ನು ಕರೆದರು. ಅವರ ಪೈಕಿ ವಯಸ್ಸಾದ ಕೆಂಜಣ್ಣ ಎಂಬಾತನನ್ನು ಮೊದಲು ವಿಚಾರಣೆ ಮಾಡಿದರು ಆತನು ಬಂದ ಕೂಡಲೆ ಪ್ರಮಾಣ ಮಾಡಿಸಿದರು.

'ನಿನ್ನ ಹೆಸರೇನು?' ಎಂದ ಮಾರ್ತಾಂಡರಾಯ.

'ಕೆಂಜಣ್ಣ, ಸ್ವಾಮಿ.'

'ಕೆಲಸ?'

'ಏನೂ ಇಲ್ಲ ಸ್ವಾಮಿ.'

'ಅಲ್ಲ, ಹಿಂದೆ ಎಲ್ಲಿ ಮಾಡುತ್ತಿದ್ದೆ?'

'ಮಂತ್ರಿಗಳ ಮನೆಯಲ್ಲಿ.'

'ನಿನಗೂ ಹಾಜೀಗೂ ಏನು ಸಂಬಂಧ?'

'ಏನೂ ಇಲ್ಲ. ಮಂತ್ರಿಯವರು ನನ್ನ ಆ ಊರಿಗೆ ಅವತ್ತು ಕಳಿಸಿದ್ದರು. ಅಲ್ಲಿ ಆತನಿಗೆ ಖಾಯಿಲೆ ಎಂಬೋ ಮಾತು ಕೇಳಿ ನಮ್ಮೂರಿನವ ಎಂತ ಸಹಾಯಕ್ಕೆ ಹೋದೆ.'

'ನಿಜ ಹೇಳು. ನೀನು ಅಲ್ಲಿಗೆ ಹೋದಾಗ ಆತನು ಬದುಕಿದ್ದನೆ?'

'ಇದ್ದ ಸ್ವಾಮಿ.'

'ನೀನೇನಾದರೂ ಕೇಳಿದೆಯಾ?'

ಕೇಳಿದೆ,

'ಏನು ಕೇಳಿದೆ? ಆತ ಏನು ಹೇಳಿದ?'

'ನ್ಯಾಯಾಧಿಪತಿಗಳು ಧೈರ್ಯಕೊಟ್ಟರೆ ಇದ್ದದ್ದು ಇದ್ದ ಹಾಗೆ ಹೇಳ್ತೀನೆ.'

'ನಿನಗೇನು ಭಯ! ಹೇಳಯ್ಯ' ಎಂದ ಮಾರ್ತಾಂಡರಾಯ.

'ಏನೂ ಭಯಪಡಬೇಕಾಗಿದ್ದಿಲ್ಲ.' ಎಂದಳು ಚಿತ್ರಾಬಾಯಿ.

'ನಾನು ಅಲ್ಲಿಗೆ ಹೋದೆ. ಆತ ಬಹಳ ಕಷ್ಟದಿಂದ ಮಾತಾಡ್ತಾಯಿದ್ದ. ನಾನು ಕೇಳಿದೆ.'

'ಏನು ಕೇಳಿದೆ?' ಎಂದ ಮಾರ್ತಾಂಡರಾಯ.

'ನಿನಗೇನಾದರೂ ಮಕ್ಕಳಿದ್ದಾರೆಯೆ? ಅಂತ.'

'ಏನು ಹೇಳಿದ?'

'ಆತ ಹೇಳಿದ ನನಗೆ ಇರೋದು ನನ್ನ ತಂಗಿ ಒಬ್ಬಳೇ. ಮಕ್ಕಳಿಲ್ಲ ಅಂದ.'

ಮಾರ್ತಾಂಡರಾಯ ಉಸ್ಸೆಂದ.

'ನೀನು ಸುಳ್ಳು ಸಾಕ್ಷಿ ಹೇಳುತ್ತಿರುವೆ. ಸರಿಯಾಗಿ ಹೇಳು, ಇಲ್ಲದಿದ್ದರೆ ನಿನ್ನನ್ನು ಇಲ್ಲಿಂದ ಗಡೀಪಾರು ಮಾಡುತ್ತಾರೆ. ಇದು ನ್ಯಾಯಾಸ್ಥಾನ' ಎನ್ನುತ್ತ ಮಾರ್ತಾಂಡರಾಯರು ನ್ಯಾಯಾಧಿಪತಿಗಳ ಕಡೆ ತಿರುಗಿ ಹೇಳಿದರು.

'ಧರ್ಮಾವತಾರ, ಈತನು ಹೇಳುತ್ತಿರುವುದು ಶುದ್ಧ ಸುಳ್ಳು. ಆತನಿಗೆ ಮಗನೊಬ್ಬನಿದ್ದ. ಶಬರಿಯೇ ಎತ್ತಿಕೊಂಡಿದ್ದಳು. ಅದನ್ನು ಇವರೆಲ್ಲಾ ನೋಡಿದ್ದಾರೆ. ಈಗ ಸುಳ್ಳು ಹೇಳುತ್ತಿದ್ದಾನೆ.'

'ನಿಜವನ್ನು ಹೇಳು.' ಎಂದರು ರಾಣಿಯವರು.

'ಹೇಳ್ತೀನೆ, ತಾಯಿ. ನಾನು ಮನೆಯಲ್ಲಿದ್ದೆ. ಹನುಮಂತ ದರೋಗ ಇಬ್ಬರೂ ನಮ್ಮ ಮನೆಗೆ ಬಂದು ನನ್ನನ್ನು ದರೋಗನ ಮನೆಗೆ ಕರೆದುಕೊಂಡು ಹೋದರು. ಅಲ್ಲಿಗೆ ಮಾರ್ತಾಂಡರಾಯರೂ ಬಂದರು. ಅವರ ಹಿಂದೆ ಸವಣಯ್ಯನವರೂ ಇದ್ದರು'

ಅಲ್ಲಿ ನೆರೆದಿದ್ದ ಜನರೆಲ್ಲ ಆ ಇಬ್ಬರು ವಕೀಲರ ಕಡೆ ನೋಡುವುದಕ್ಕೆ ಮೊದಲು ಮಾಡಿದರು.

'ಆಮೇಲೆ?' ಎಂದಳು ಚಿತ್ರಾಬಾಯಿ.

'ಅಲ್ಲಿಗೆ ಮಿಕ್ಕ ಮೂವರನ್ನೂ ಕರೆದುಕೊಂಡು ಬಂದಿದ್ದರು. ನಮ್ಮ ನಾಲ್ಕು ಮಂದಿಯನ್ನೂ ಒಂದು ಕಡೆ ಕೂಡಿಸಿದರು ಈಗ ಶಬರಿಯ ಕಂಕಳಲ್ಲಿರುವ ಮಗುವನ್ನು ಅಲ್ಲಿಗೆ ತಂದಿದ್ದರು. ಅದನ್ನು ಹಾಜಿಯ ಮಗುವೆಂದು ಹೇಳಬೇಕೆಂದು ನಮ್ಮನ್ನು ಒತ್ತಾಯಪಡಿಸಿದರು. ನಮಗೆ ಹದಿನೈದು ಹದಿನೈದು ರೂಪಾಯಿಗಳನ್ನು ಕೊಟ್ಟರು. ನಾವು ತೆಗೆದುಕೊಂಡು ಹೇಳುತ್ತೇವೆ ಎಂದೆವು'

'ಹೌದು. ನೀವು ಸುಳ್ಳು ಹೇಳುವುದಕ್ಕೆ ಹೇಗೆ ಒಪ್ಪಿದಿರಿ?' ಎಂದಳು ಚಿತ್ರಾಬಾಯಿ.

'ಮಹಾತಾಯಿ, ನಮಗೆ ಹೊಟ್ಟೆಗಿಲ್ಲ, ಬಟ್ಟೆಗಿಲ್ಲ. ರೂಪಾಯಿ ನೋಡಿದ ಕೂಡಲೆ ಏನು ಬೇಕಾದರೂ ಹೇಳುವ ಸ್ಥಿತಿಗೆ ಬಂದಿದ್ದೆವು. ದರೋಗನಿಗೆ ನೂರು ರೂಪಾಯಿ ಕೊಟ್ಟು ಸರಿಮಾಡಿಕೊಂಡಿದ್ದರು. ನಾವಿಲ್ಲ ಎಂದರೆ ನಮ್ಮ ಮನೆಗಳನ್ನೇ ಸುಟ್ಟುಬಿಡುತ್ತಿದ್ದ ದರೋಗ. ನಿಜಸ್ಥಿತಿ ಹೇಳಿದ್ದೇವೆ. ತಾವು ನಮ್ಮನ್ನು ಕಾಪಾಡದಿದ್ದರೆ ನಾವು ಕೆಟ್ಟುಹೋಗುತ್ತೇವೆ. ದರೋಗ ನಮ್ಮನ್ನು ಜೀವದೊರಸೆ ಬಿಡ.'

'ಅಂದರೆ ಆ ಮಗು ಹಾಜೀದಲ್ಲ?'

'ಅಲ್ಲ, ಮಹಾತಾಯಿ, ಖಂಡಿತವಾಗಿಯೂ ಅಲ್ಲ.'

ಕೆಂಚಣ್ಣನನ್ನು ಕಳಗಿಳಿಸಿದ ಮೇಲೆ ಮಿಕ್ಕವರನ್ನು ವಿಚಾರಿಸಿದರು. ಅವರೆಲ್ಲರೂ ಇದೇ ಹೇಳಿದರು. ದರೋಗನನ್ನು ಕರೆ ಎಂದಾಗ ಅವನು ಊರಲ್ಲೇ ಇರಲಿಲ್ಲ. ಅವನು ಪುನಃ ಊರಿಗೆ ಬಂದ ಹಾಗೇ ತೋರಲಿಲ್ಲ.

ರಾಣಿ ಶಬರಿಯ ಕಡೆಗೆ ತಿರುಗಿ ಹೇಳಿದಳು. 'ನೀನು ಹೆಂಗಸು. ನಿನಗೆ ಅನ್ಯಾಯವಾಗಿ ದಂಡನೆ ವಿಧಿಸಲು ನನಗಿಷ್ಟವಿಲ್ಲ. ನಿಜಸ್ಥಿತಿಯನ್ನು ಹೇಳು'

'ಮಹಾತಾಯಿ, ಕ್ಷಮಿಸಿ. ನಿಜವಾಗಿಯೂ ನನಗೆ ಮಕ್ಕಳಿಲ್ಲ. ಈ ಮಾರ್ತಾಂಡರಾಯರು ಸುಳ್ಳು ಹೇಳಬೇಕೆಂದು ಒತ್ತಾಯಪಡಿಸಿದರು. ತಪ್ಪು ಹೇಳಿದ್ದೇನೆ. ಸುಳ್ಳುಹೇಳಿದ್ದೇನೆ. ಹಣದಾಸೆಗಾಗಿ ಇದೆಲ್ಲಾ ಮಾಡಿದೆ. ನಿಜವಾಗಿಯೂ ಆಸ್ತಿ ನನಗೆ ಸೇರಬೇಕಾದ್ದಲ್ಲ'

'ವಕೀಲರಿಗೆ ಏನು ಕೊಟ್ಟಿದ್ದೀ?'

ಶಬರಿಯು ಎಲ್ಲವನ್ನೂ ಹೇಳಿದಳು. ನ್ಯಾಯವು ಕಿಶಿನಳ ಕಡೆಗೇ ಆಯಿತು. ಕಿಶಿನಳು ಎದ್ದು ನಿಂತು 'ತಾಯಿ, ಆಕೆ ಮದುವೆಯಾಗಲಿಲ್ಲ ಅಷ್ಟೆ. ಆದಾಗ್ಯೂ ನನ್ನ ಅಣ್ಣನ ಹೆಂಡತಿ. ಆಕೆಗೆ ಸಲ್ಲಬೇಕಾದ್ದನ್ನು ತಾವೇ ಕೊಡಿಸಬೇಕು. ನನ್ನ ಈ ಆಸ್ತಿಯಲ್ಲಿ ಆಕೆಗೆ ಏನು ಕೊಡಬೇಕೋ ತಾವೇ ಹೇಳಬೇಕು' ಎಂದು ಚಿತ್ರಾಬಾಯಿಯವರನ್ನು ಕೇಳಿದಳು.

'ನಿನಗಿಷ್ಟವಿದ್ದಷ್ಟು ಕೊಡಬಹುದು.' ಎಂದಳು ಆಕೆ.

'ಅರ್ಧವನ್ನು ಆಕೆಗೆ ಬಿಟ್ಟಿದ್ದೇನೆ' ಎಂದಳು ಕಿಶಿನಳು.

ಇಷ್ಟು ನಡೆಯುತ್ತಿದ್ದಾಗ ಮಾರ್ತಾಂಡರಾಯರು ಸವಣಯ್ಯನವರು ನ್ಯಾಯಾಸ್ಥಾನವನ್ನು ಬಿಡಲು ಹೊಂಚುಹಾಕುತ್ತಿದ್ದರು. ಇನ್ನೇನು ಎಲ್ಲವೂ ಮುಗಿಯಿತು ಎನ್ನುವ ಹೊತ್ತಿಗೆ, ನೇಮಿಚಂದ್ರಪಂಡಿತರು ಒಳಕ್ಕೆ ಬಂದು ಹೇಳಿದರು.

'ತಾಯಿ, ಈ ವಕೀಲರಿಬ್ಬರೂ ಬಹಳ ಮೋಸದಿಂದ ತಮ್ಮ ಆಸ್ತಿಯನ್ನು ಸಂಪಾದಿಸಿದ್ದಾರೆ. ಇದಕ್ಕೆ ಪ್ರಕೃತದಲ್ಲಿ ನಡೆದ ವ್ಯವಹಾರವೆ ಸಾಕಾದಷ್ಟು ಸಾಕ್ಷಿ. ಅವರಿಗಿದ್ದ ಸನದನ್ನು ಕಿತ್ತುಹಾಕಿ ಅವರ ಆಸ್ತಿಯನ್ನು ನಮ್ಮೂರಿನ ಅನ್ನಛತ್ರಗಳಿಗೆ ಹಂಚಬೇಕು.'

'ನಾವೇ ಬಿಟ್ಟುಬಿಡತೇವೆ. ನಮಗೆ ಆ ಅಪಮಾನ ಮಾಡಬೇಡಿ.' ಎಂದರು ಅವರು.

ಅವರ ಆಸ್ತಿಯನ್ನು ತೆಗೆದುಕೊಳ್ಳಲಿಲ್ಲ. ಆ ವಕೀಲರು ತಮ್ಮ ಕೆಲಸವನ್ನು ಬಿಟ್ಟರು. ರಾಣಿಯವರು ಹೇಳಿದಂತೆ ವರ್ಷಕ್ಕೆ ಒಬ್ಬೊಬ್ಬರೂ ಐನೂರು ರೂಪಾಯನ್ನು ವಕೀಲರ ಸಂಘಕ್ಕೆ ಕೊಡಲು ಒಪ್ಪಿಕೊಂಡರು.

ಇನ್ನೊಂದು ವಿಚಾರ ಮಟ್ಟಿಗೆ ಉಳಿಯಿತು. ರಾಜೀ ರುಸ್ತುಮ ಮೊಕದ್ದಮೆ ಬರುವಂತೆ ಕಂಡಿತು. ಅದಕ್ಕೆ ರಾಜೀಗೆ ಯಾವ ಶಿಕ್ಷೆ ಕೊಡಬೇಕೆಂದು ನಾಲ್ಕಾರು ಪಂಡಿತರ ಕಡೆಗೆ ಕಾಗದಗಳನ್ನು ಬರೆಸಿದಳು ರಾಣಿ. ಅನೇಕ

ಸಲಹೆಗಳು ಬಂದವು. ಆದರೆ ಕೊನೆಗೆ ನೇಮಿಚಂದ್ರಪಂಡಿತನ ಸಲಹೆಯೆ ಸರಿಯೆಂದು ಗೊತ್ತುಮಾಡಿಕೊಂಡರು. ಆದರಲ್ಲಿ ಹೀಗಿತ್ತು.

'ರುಸ್ತುಮನಿಗೆ ಅಭ್ಯಂತರವಿಲ್ಲದಿದ್ದರೆ ಆವಳನ್ನು ಅವನಿಗೆ ಕೊಟ್ಟು ಮದುವೆ ಮಾಡುವುವೇ ಇದಕ್ಕೆ ತಕ್ಕ ಶಿಕ್ಷೆ. ಇದರಿಂದ ಅವನಿಗೆ ಬೇಕಾದಾಗ ಆವಳನ್ನು ಒದೆಯಲು ಅನುಕೂಲವಾಗುತ್ತದೆ.'

ರಾಜಿ ನೋಡೋದಕ್ಕೆ ಚೆನ್ನಾಗಿದ್ದಳು. ರುಸ್ತುಮ ಬೇಡ ಎನ್ನಲಿಲ್ಲ.

